ಮಾಗಡಿ ಶ್ರೀ ಯತಿರಾಜ ಮಠಂ ಗ್ರಂಥಮಾಲೆ

ಪ್ರಚಾರ ಪುಸ್ತಕ ಮಾಲೆ—ಐದು



# ಶಾತ್ತಾದ ಶ್ರೀವೈಷ್ಣವರ ಗತ ವೈಭವ

ಸಂಪಾದಕ

ಎಚ್. ಆರ್. ಸಂಪತ್ಕುಮಾರನ್



ವಿಳಾಸ

ನಂ. 36. ಮಲ್ಲಿಕಾರ್ಜುನ ಗುಡಿ ಬೀದಿ
ಬಸವನಗುಡಿ, ಬೆಂಗಳೂರು—4

ಬೆಲೆ ರೂ. 2-50

ಮಾಗಡಿ ಶ್ರೀ ಯತಿರಾಜ ಮಠಂ ಗ್ರಂಥಮಾಲಾ

ಪ್ರಚಾರ ಪುಸ್ತಕ ಮಾಲೆ—ಐದು

# ಶಾತ್ತಾದ ಶ್ರೀವೈಷ್ಣವರ ಗತ ವೈಭವ

ಸಂಪಾದಕ

ಎಚ್. ಆರ್. ಸಂಪತ್ಕುಮಾರನ್

36, ಮಲ್ಲಿಕಾರ್ಜುನ ಗುಡಿ ಬೀದಿ

ಬಸವನಗುಡಿ, ಬೆಂಗಳೂರು–4

# ಅರ್ಪಣೆ

ಶಾತ್ತಾದ ಶ್ರೀವೈಷ್ಣವ ಪರಿಷತ್ತಿನ
ಮತ್ತು
ತಿರುಮಲ ಪರವಸ್ತು ಮಠಂ ತಿರುಪತಿ ಶಿಷ್ಯ
ಮಹಾಮಂಡಲಿಯ ಕಾರ್ಯದರ್ಶಿಗಳು
ಮತ್ತು
ಅವರ ಧರ್ಮಪತ್ನೀ ವರ್ಗಕ್ಕೆ

ವಿ. ರಂಗನಾಥನ್, ಬಿ.ಇ
ಶಾಂತಾ ರಂಗನಾಥನ್

ಎಚ್. ಎಸ್. ವೇಣುಗೋಪಾಲ್. ಎಂ.ಎಸ್ಸಿ.. ಬಿ.ಇಡಿ
ನಳಿನಿ ವೇಣುಗೋಪಾಲ್ (ಬಿ.ಎ.)

ಆರ್. ಶ್ರೀನಿವಾಸನ್
ಸುಪರ್ಣ ಶ್ರೀನಿವಾಸನ್

ಇವರಿಗೆ
ವಿಶ್ವಾಸ ಪೂರ್ವಕವಾಗಿ ನಿವೇದನೆ

ಎಚ್. ಆರ್. ಸಂಪತ್ಕುಮಾರನ್
ಸಂಪಾದಕ

# ಮೂರು ಮಾತು

ಕನ್ನಡದ ಕವಿ ಶ್ರೀ.ನಂ.ಶ್ರೀ.ರವರು ಹಿಂದೆ ಕನ್ನಡಿಗರ ಕೊರಗುವಿನಲ್ಲಿ ಹೀಗೆ ತಮ್ಮ ಅಳಲನ್ನು ತೋಡಿಕೊಂಡರು.

ಸೊಕ್ಕಿನಲಿ (ಹೆಮ್ಮೆಯಲಿ) ತಲೆಯೆತ್ತಿ ಜೊತೆಯವರ ಕೂಟದಲಿ,
ನಾವು ಸಮ ನಿಮಗೆಂಬ ನುಡಿವ ಬಲವಿಲ್ಲ ;
ಮಿಕ್ಕವರು ಕಡೆಗಣಿಸಿ ನೂಕಿದಾ ಕಡೆ ಬಿದ್ದು,
ಯಾವ ಮಂಕೋ ಕವಿದು ಹದುಗಿರುವೆವಲ್ಲ;
ರೊಕ್ಕ ಕೈಯೊಳಗಿಲ್ಲ, ಹುರುಡು ಮೈಯೊಳಗಿಲ್ಲ,
ಹೆಮ್ಮೆಯೊಂದನು ನೆಚ್ಚಿ ದೆಸೆಗೆಟ್ಟೆವಲ್ಲ.

ಅಕ್ಕತಂಗಿಯರೆಲ್ಲ ಮುಂದು ಮುಂದಾಗಿರಲು,
ನಮ್ಮ ತಾಯೊಬ್ಬಳೇ ಸೊರಗಿರುವಳಲ್ಲ;
ಅಮ್ಮನನು ಕೈಬಿಡದೆ ಇನ್ನು ನಡೆಸುವೆವೇ ?
ಹಿರಿಯ ಹೆಸರನು ತಿರುಗಿ ಗಳಿಸಿಕೊಳುವೆವೇ ?
ಸರಿಯವರ ತಲೆಮೆಟ್ಟಿ (ಸರಿಸಮಕೆ) ಮುಂದೆ ನಿಲ್ಲುವೆವೇ ?
ನೆಮ್ಮದಿಯ ಬೆಳಕಿನಲಿ ನಾವು ಬಾಳುವೆವೇ ?—ಎಂದು.

ಅಂದಿನ ಈ ಮಾತು, ಶ್ರೀಯಃಪತಿಯಾಣೆ ಇಂದಿಗೂ ಸತ್ಯ.

ವೈಚಾರಿಕ ದೃಷ್ಟಿಯಿಂದ **ಶಾತ್ತಿನಿ, ಶಾತ್ತಾದ; ಪ್ರವೃತ್ತಿ, ನಿವೃತ್ತಿ** ಎಂಬ ಪ್ರಭೇದಗಳನ್ನು ಅಭ್ಯಸಿಸಲು ಈ ಕೆಳಗಿನ ಪುಸ್ತಕಗಳನ್ನು ಅವಲೋಕನ ಮಾಡುವ ಸುಸನ್ನಿವೇಶ ಒದಗಿತ್ತು. ಶ್ರೀಮತ್ ಪಿಳ್ಳೈ ಲೋಕಂ ಜೀಯರ್ ಕೃತ "ಶ್ರೀ ವೈಷ್ಣವ ಸಮಯಾಚಾರ ನಿಷ್ಕರ್ಷಮ್ (ಮದರಾಸು–1909) ಶ್ರೀ ಆಳಘಶಿಂಗರ ಪಂಡಿತರ "ಶ್ರೀ ವೈಷ್ಣವ ಸಿದ್ಧಾಂತ ದೀಪಿಕಾ" (ಮದ್ರಾಸ್) ತಿರುಪತಿ ಪರವಸ್ತು ಮಠದ ಶ್ರೀ ಶಠಜಿದ್ಗ್ರಂಥ ಮಾಲೆಯ ನಾಲ್ಕನೇ ಕುಸುಮವಾದ "ಶ್ರೀ ಶಠಜಿದ್ವೃತ್ತನಮು" ಇತ್ಯಾದಿ ಗ್ರಂಥಗಳನ್ನು ಯಥಾಮತಿ, ಯಥಾಶಕ್ತಿ ನಾನು ಅರ್ಥ ಮಾಡಿಕೊಂಡಾಗ, ಶ್ರೀ ವೈಷ್ಣವರಲ್ಲಿ **ಶಾತ್ತಿನಿಯ**

ವರ ಪ್ರವೃತ್ತಿ ಮಾರ್ಗವು, ಶಾಶ್ವಾದರ ನಿವೃತ್ತಿ ಮಾರ್ಗವು ಪರಸ್ಪರ ಸಂ ಸಮವೆಂದು, ಕವಲೆರಡು ಕುಲವೊಂದು ಎಂದು ಗೋಚರವಾಯಿತು. ಅಷ್ಟೇ ಅಲ್ಲ, ಒಂದಕ್ಕೊಂದು ಪೂರಕವೆಂದು; Complementary to each other ಎಂದು ಖಚಿತವಾಯಿತು. ಶ್ರೀವೈಷ್ಣವನ ಧಾರ್ಮಿಕ ಜೀವನ ಪ್ರಯಾಣಕ್ಕೆ—ರಥದ ಎರಡು ಚಕ್ರಗಳಂತೆ—ಈ ಎರಡೂ ಅಗತ್ಯವೆಂದು, ಅಷ್ಟೇ ಅಲ್ಲ, ಅನಿವಾರ್ಯವೆಂದು ನನಗೆ ಅನಿಸಿದವು.

ನನ್ನ ಅಧ್ಯಯನದ ಆನಂದವನ್ನು ಇತರೆಯವರೊಡನೆ ಹಂಚಿಕೊಂಡು ಅನುಭವಿಸಲು, ಈ ಒಂದು ಸಣ್ಣ ಪುಸ್ತಕ ರೂಪದ ಅಲರನ್ನು, ಎಲ್ಲ ಶ್ರೀ ವೈಷ್ಣವರ ಅಡಿ ಹುಡಿಯಲ್ಲಿ ಭಕ್ತಿ ಪೂರ್ವಕವಾಗಿ ಅರ್ಪಿಸಿದ್ದೇನೆ. ಗುಣಗ್ರಾಹಿಗಳ ಅಭಿಪ್ರಾಯವೇನೆಂದು ತಿಳಿಯಲು ಚಾತಕ ಪಕ್ಷಿಯಾಗಿದ್ದೇನೆ. ಸೆರಗೊಡ್ಡಿ ನಿಂತಿದ್ದೇನೆ.

ಅಲ್ಲದೆ, ನನ್ನ ಬಾಂಧವರಿಗೆ ಬಡಿದಿರುವ ಕ್ಲೈಬ್ಯದ ಸಿಡಿಲು ಕವಚ ಕಳಚಿ ಬೀಳವುದಕ್ಕೆ ಇದು ನೆರವಾಗುವುದೆಂದು ನಂಬಿದ್ದೇನೆ.

ಈ ಪುಸ್ತಕವು ಪರಿಪೂರ್ಣವಾದ ಸಮಗ್ರವಾದ ಸಂಗ್ರಹವಲ್ಲ. ಈ ದಿಶೆಯಲ್ಲಿ ಇನ್ನೂ ಹೆಚ್ಚಿನ ಸಂಶೋಧನೆ ಮಾಡುವವರಿಗೆ, ಇದು ಪ್ರಪ್ರಥಮ ಪುಸ್ತಕವಾಗುವುದೆಂದು ನಂಬಿದ್ದೇನೆ.

ಉತ್ತಿಷ್ಠತ, ಜಾಗ್ರತ; ಪ್ರಾಪ್ಯವರಾನ್ನಿ ಬೋಧತ-ಏಳಿ, ಎಚ್ಚರಗೊಳಿ; ಗುರಿ ಮುಟ್ಟುವವರೆಗೂ ನಿಲ್ಲದಿರಿ—ಎಂಬ ಉಪನಿಷತ್ ವಾಣಿಯು ನಮಗೆ ಸ್ಫೂರ್ತಿ ಸಂಜೀವಿನಿಯಾಗಲೆಂದು, ಸ್ಪರ್ಶ ಚಿಂತಾಮಣಿಯಾಗಲೆಂದು ಬಯಸುತ್ತೇನೆ.

ಈ ಪುಸ್ತಕದಲ್ಲಿರುವ ಭವ್ಯಬೆಳೆ, ಸುಂದರ ಸನ್ನಿವೇಶ, ವೈಭವ-ಪ್ರಸಂಗ ಎಲ್ಲವೂ ನನ್ನ ಪರಮಪೂಜ್ಯ ಹಿರಿಯರದು. ಆದರೆ ಇರಬಹುದಾದ ಕೀಳಾದ ಕಳೆ, ಬಿಗಿ ಶೈಥಿಲ್ಯ, ಸಣ್ಣತನ ಎಲ್ಲವೂ ನನ್ನದು, ಎಂದು ವಿನಮ್ರನಾಗಿ ಒಪ್ಪಿಕೊಳ್ಳುತ್ತೇನೆ.

ಈ ಅಧ್ಯಯನದ ಕರಡು ನವೆಂಬರು 1967ರಲ್ಲಿ ಮೂಡಿ ಬಂದಿತು. ಮುದ್ರಣದ ಪ್ರತಿ 13–1–1968 ರಂದೇ ಅಣಿಯಾಯಿತು. ಆರ್ಥಿಕ ಅಸಾಮರ್ಥ್ಯತೆಯಿಂದ ಇದು ಹೊರಬರಲು ಇಷ್ಟು ತಡವಾಯಿತು.

ತಿರುಪತಿಯ ಶಿಲಾಶಾಸನಗಳನ್ನು ಒದಗಿಸಿಕೊಟ್ಟ—ವೈಯಾಕರಣ ಪಂಚಾನನ, ವಿದ್ವತ್ಕವಿ ಸಾರ್ವಭೌಮ, ಶ್ರೀ ವೈಖಾನಸ ರತ್ನಾಕರ, ಆಗಮ ವಾಚಸ್ಪತಿ, ಆಗಮಾಚಾರ್ಯ, ಆಗಮ ಚಕ್ರವರ್ತಿಗಳಾದ ಶ್ರೀಮಾನ್ ರೊಂಪಿಚೆರ್ಲ ಪಾರ್ಥಸಾರಥಿ ಭಟ್ಟಾಚಾರ್ಯರಿಗೆ ನನ್ನ ಅನಂತಾನಂತ ವಂದನೆಗಳು. ಕೋಯಿಲ್ ಒಲುಗು, ಶ್ರೀರಂಗಂ ವೈಕುಂಠ ಏಕಾದಶೀ ಅಧ್ಯಯನೋತ್ಸವಮು ಗ್ರಂಥಗಳನ್ನು ಒದಗಿಸಿಕೊಟ್ಟ, ತಿರುಪತಿಯ ಶ್ರೀ ಎಸ್. ಟಿ. ನಾರಾಯಣ ಮೂರ್ತಿಗಳಿಗೂ (ಇಂಡಿಯನ್ ಎಕ್ಸ್‌ಪ್ರೆಸ್ ಉಪಸಂಪಾದಕರು, ಬೆಂಗಳೂರು) ಇತರೆ ಪುಸ್ತಕಗಳನ್ನು ಒದಗಿಸಿದ ಕುಣಿಗಲಿನ ಶ್ರೀ ವಿ. ಶ್ರೀನಿವಾಸ ದೇಶಿಕಾಚಾರ್‌ರವರಿಗೂ, ಮತ್ತು ಶ್ರೀ ಯಂಬಾರ್ ಜೀಯರ್‌ರವರ ಪುತ್ರರಿಗೂ ನನ್ನ ವಂದನೆಗಳು.

ನನ್ನ ಪರಮ ಮಿತ್ರರು ಶ್ರೀ ಲಕ್ಷ್ಮೀ ಪ್ರಿಂಟಿಂಗ್ ಪ್ರೆಸ್ಸಿನ ವ್ಯವಸ್ಥಾಪಕರೂ ಆದ ಶ್ರೀ ಹೆಚ್. ಎಸ್. ಶೇಷಾದ್ರಿಯವರು ರಸ್ತೆ ಅಘಾತದಲ್ಲಿ ಸಿಕ್ಕಿ, ಕಾಲು ಊನವಾಗಿ ಕೆಲವು ತಿಂಗಳ ಹಿಂದೆ ಹಾಸಿಗೆ ಹಿಡಿದರು. ನನ್ನ ಕಾಲೇ ಮುರಿದಂತೆ ನನಗೂ ನೋವಾಯಿತು. ಶ್ರೀನಿವಾಸನ ಕೃಪೆ. ಬೇಗ ವಾಸಿಯಾಯಿತು. ಗ್ರಂಥ ಮಾಲೆಯ ಮೂರನೇ ಹೂವಾಗಿ ಅರಳಬೇಕಾಗಿದ್ದುದು, ಐದನೆಯದಾಗಿ ಹೊರ ಬರುತ್ತಿದೆ. ತಡವಾಗಿಯಾದರೂ ಸುಂದರವಾಗಿ ಮೂಡಿ ಬಂದಿದೆ. ಶ್ರೀಯುತರಿಗೆ ನನ್ನ ಅಭಿವಂದನೆಗಳು.

ಗ್ರಂಥ ಮಾಲೆಯ ಹಿತೈಷಿಗಳೇ ಈ ಕೆಲಸದ ಕಾರಣ ಪುರುಷರು. ಅವರ ಶ್ರೀ ರಕ್ಷೆ, ಗ್ರಂಥ ಮಾಲೆಯನ್ನು ಮುಂದೆಯೂ ಬೆಳೆಸುವುದೆಂದು ನಂಬಿದ್ದೇನೆ.

ತಾ. 5–9–1971

ಎಚ್. ಆರ್. ಸಂಪತ್ಕುಮಾರನ್,
ಸಂಪಾದಕ.

# ಅಧ್ಯಾಯ ೧

ತಿರುಪತಿ ದೇವಸ್ಥಾನಗಳ ವಿಚಾರಣ ಕರ್ತರಾದ ಶ್ರೀ ಮಹಂತ ಪ್ರಯೋಗದಾಸ್‌ಜಿ (ಹಿಸ್ ಹೋಲಿನೆಸ್) ಸ್ವಾಮಿಯವರ ನೇತೃತ್ವದಲ್ಲಿ ಒಂದು ಚಿರಸ್ಮರಣೀಯವಾದ ಮಹತ್ತರ ಕೆಲಸ ನಡೆಯಿತು. ತಿರುಪತಿ ಮತ್ತು ತಿರುಮಲೈ ಬೆಟ್ಟಗಳಲ್ಲಿರುವ ಎಲ್ಲ ದೇವ ಮಂದಿರಗಳಲ್ಲಿ, ತೀರ್ಥಗಳಲ್ಲಿ (ಯಾತ್ರಿಕರು ಸ್ನಾನ ಮಾಡುವ ಪವಿತ್ರ ನದಿ ಅಥವ ಕೊಳ) ಮತ್ತು ಇತರ ಪ್ರಾಮುಖ್ಯವಾದ ಸ್ಥಳಗಳಲ್ಲಿ ಕಂಡು ಬರುವ ಶಿಲಾ ಶಾಸನಗಳನ್ನು ಸಂಗ್ರಹಿಸಿ, ಅವುಗಳನ್ನೆಲ್ಲಾ ಉಪಯುಕ್ತವಾದ ರೀತಿ ವಿಂಗಡಣೆ ಮಾಡಿ, ಎಂಟು ಬೃಹತ್ ಸಂಪುಟಗಳನ್ನು ಹೊರಕ್ಕೆ ತಂದಿದ್ದಾರೆ.

ಇದೇ ಕೆಲಸವು ತಿರುಮಲೈ ತಿರುಪತಿ ದೇವಸ್ಥಾನಗಳ ಕಮೀಷನರ್‌ಗಳಾಗಿದ್ದ ರಾವ್‌ಬಹದ್ದೂರ್ ಕೆ. ಸೀತಾರಾಮರೆಡ್ಡಿಯವರಿಂದಲೂ ಮತ್ತು ಎ. ರಂಗನಾಥ ಮೊದಲಿಯಾರ್‌ರವರಿಂದಲೂ ಮುಂದುವರಿಸಲ್ಪಟ್ಟದೆ.

ಈ ಪುಸ್ತಕಗಳ ಪ್ರಥಮ **ವರದಿ** ಸಂಪುಟಕ್ಕೆ—ಮದರಾಸ್ ವಿಶ್ವ ವಿದ್ಯಾನಿಲಯದ ಪ್ರಾಚ್ಯ ಸಂಶೋಧನಾ ವಿಭಾಗದ ಪ್ರೊಫೆಸರ್ ಕೆ. ಎ. ನೀಲಕಂಠ ಶಾಸ್ತ್ರಿಗಳು—ಸುಂದರ ಮುನ್ನುಡಿಯನ್ನು ಬರೆದು ಗ್ರಂಥಕ್ಕೆ ಜೀವ ಕಳೆ ತುಂಬಿದ್ದಾರೆ. ಪ್ರಾಚೀನ ಇತಿಹಾಸ ಸಂಶೋಧಕರಿಗೆ, ಅದರಲ್ಲೂ ದಕ್ಷಿಣ ಭಾರತದ ಧಾರ್ಮಿಕ, ಚಾರಿತ್ರಿಕ, ಸಾಮಾಜಿಕ ಇತಿಹಾಸಕ್ಕೆ (ಇತಿ—ಈ ರೀತಿ ಹ—ಅದು, ಆಸ—ಇತ್ತು) ಸಂಬಂಧಿಸಿದ ವಿಷಯದ ಸಂಶೋಧನಾ ಕಾರ್ಯದಲ್ಲಿ ತೊಡಗಿರುವ ವಿದ್ಯಾರ್ಥಿ ವೃಂದಕ್ಕೆ, ಬೃಹತ್ತು ಮತ್ತು ಮಹತ್ತೂ ಆದ ಈ ಹೊತ್ತಿಗೆಗಳ ಅವಲೋಕನ, ಅನಿವಾರ್ಯ

ಈ ಎಲ್ಲ ಶಾಸನಗಳ ಸಂಗ್ರಹಣೆ, ವಿಂಗಡಣೆ; ಮೂಲ ಕರಡು ನಿರ್ಮಾಣ, ಅವುಗಳ ಅನುವಾದ ಇತ್ಯಾದಿ ಕೆಲಸಗಳು 1922 ರಿಂದ ಅಖಂಡವಾಗಿ,

1927ರ ವರೆಗೆ ನಡೆದಿವೆ. ಅನೇಕ ವಿದ್ವಾಂಸರ ಅಹರ್ನಿಶಿ ದುಡಿತದ ಸಂಕೇತ ವಾಗಿ ಈ ರಾಜಗ್ರಂಥಗಳು ಹೊರ ಬಂದಿವೆ. ಈ ರೀತಿ ಸಮಗ್ರವಾಗಿ ಸಂಗ್ರಹಿ ಸಲ್ಪಟ್ಟ ಶಾಸನಗಳ ಸಂಖ್ಯೆ ಒಟ್ಟು 1252 (ತಿರುಪತಿ 346, ತಿರುಮಲೈ 640, ಇತರೆ 266 ಶಾಸನಗಳು) ಇದ್ದು, ಅವುಗಳನ್ನು ಈ ರೀತಿ ವರ್ಗೀಕರಿಸ ಲಾಗಿದೆ.

1) ಪಲ್ಲವ, ಚೋಳ, ಪಾಂಡ್ಯ, ತೆಲುಗು ಪಲ್ಲವರು, ಯಾದವ ರಾಯರು, ತೆಲುಗು ಚೋಳರು ಮತ್ತು ವಿಜಯನಗರದ ಪ್ರಥಮ ಭಾಗಕ್ಕೆ (ಕ್ರಿ. ಶ. ಸುಮಾರು 800 ರಿಂದ 1500 ರ ವರೆಗೆ) 236 ಶಾಸನಗಳು.

2) ಸಾಳುವ ನರಸಿಂಹರಾಜನ (ಕ್ರಿ.ಶ. 1445 ರಿಂದ 1504ರವರೆಗೆ) 168 ಶಾಸನಗಳು.

3) ವಿಜಯ ನಗರದ ಕೃಷ್ಣರಾಯರ ಕಾಲದ (ಕ್ರಿ. ಶ. 1509 ರಿಂದ 1531 ರ ವರೆಗೆ) 229 ಶಾಸನಗಳು.

4) ಅಚ್ಯುತರಾಯನ ಕಾಲದ (ಕ್ರಿ.ಶ. 1530–1542 ರ ವರೆಗೆ) 251 ಶಾಸನಗಳು.

5) ಸದಾಶಿವರಾಯನ ಕಾಲದ (ಕ್ರಿ.ಶ. 1541–1574 ರ ವರೆಗೆ) 176 ಶಾಸನಗಳು.

6) ವೆಂಕಟಪತಿರಾಯರ ಕಾಲದ 192 ಶಾಸನಗಳು.

ಹೀಗೆ ಒಟ್ಟು 1252 ಶಾಸನಗಳು ಸಂಗ್ರಹವಾಗಿವೆ. ಅನನ್ವೇಷಿತ ವಾಗಿದ್ದ ಭಾಗಗಳನ್ನು ಈಗ ಅನ್ವೇಷಣೆ ಮಾಡಿ, ಆ ಎಲ್ಲ ಶಾಸನಗಳನ್ನು ಕ್ರೋಢೀಕರಿಸಿ, ಇಂಗ್ಲೀಷ್ ಭಾಷೆಗೆ ಅನುವಾದ ಮಾಡಲಾಗಿದೆ. ಇದರೊಡನೆ ಬಹು ಉಪಯುಕ್ತವಾದ ಟಿಪ್ಪಣಿ ಮತ್ತು ವಿಪುಲ ಪರಿಶಿಷ್ಟವನ್ನೂ ಕೊಡಲಾ ಗಿದೆ. ಇವುಗಳಲ್ಲಿ ಹೆಚ್ಚು ಶಾಸನಗಳು ತಮಿಳು ಭಾಷೆಯಲ್ಲಿವೆ. ಕೆಲವು ಕನ್ನಡ, ತೆಲುಗು ಭಾಷೆಗಳಲ್ಲೂ ಇವೆ. ಕನ್ನಡ ಶಾಸನಗಳಲ್ಲಿ ಕೆಲವು ನಂದಿ

ನಾಗರಿ ಲಿಪಿಯಲ್ಲಿ, ಕೆಲವು ತೆಲುಗು ಲಿಪಿಯಲ್ಲಿ, ಕೆಲವು ಕನ್ನಡ ಭಾಷೆ ಯಲ್ಲಿರುವುದು ಓದುಗರ ಕುತೂಹಲಕ್ಕೆ ಕಚುಗುಲಿ ಇಡುತ್ತವೆ. ಈ ರೀತಿ ಒಟ್ಟಿನಲ್ಲಿ 50 ಶಾಸನಗಳು ತೆಲುಗು ಕನ್ನಡ ಭಾಷೆಯಲ್ಲಿವೆ. ಅಲ್ಲದೆ ಈಗ ದೊರಕಿರುವ 3,000 ತಾಮ್ರ ಶಾಸನಗಳಲ್ಲಿ ಸುಮಾರು 3,000 ಭಕ್ತಿ ಗೀತೆ ಗಳು "ಸಂಕೀರ್ತನ" ಶೈಲಿಯಲ್ಲಿ ದೊರಕಿವೆ.

ತಿರುಪತಿಯ ತಿರುಮಲೈ ದೇವಸ್ಥಾನವು ಭಾರತದ ಅತ್ಯಂತ ಪುರಾತನವೂ ಸುಪ್ರಸಿದ್ಧವೂ ಆದ ದೇವ ಮಂದಿರಗಳಲ್ಲಿ ಒಂದು. *ಸಂಗಮ ಯುಗದ ತಮಿಳು **ಶಿಲಪ್ಪಾದಿಕಾರಂ** ಮಹಾಕಾವ್ಯದಲ್ಲೂ ಈ ಬೃಹನ್ಮಂದಿರದ ಉಲ್ಲೇಖವಿದೆ.

ದಕ್ಷಿಣ ಭಾರತದಲ್ಲಿ *1 ಕ್ರಿ.ಶ. 7 ನೇ ಶತಮಾನಕ್ಕೂ 9 ನೇ ಶತ ಮಾನಕ್ಕೂ ಮಧ್ಯೆ ಇದ್ದ ಅನೇಕ **ಆಳ್ವಾರುಗಳು**, ತಿರುಪತಿ ಬೆಟ್ಟಕ್ಕೆ ಯಾತ್ರಾರ್ಥಿ 'ಳಾಗಿ ಹೋಗಿ ಬಂದ ಉಲ್ಲೇಖ, ಈ ಶಾಸನಗಳಲ್ಲಿ ದೊರಕು ತ್ತದೆ.

*2"The earliest mention of the hill on which Tirupati stands, is found in the Tamil literature of the SANGAM age" ...........................

* The ancient classic Shilappadikaram in the Second Century A.D. 1940 ರ ಮಾರ್ಚ್‌ನಲ್ಲಿ ತಿರುಪತಿಯಲ್ಲಿ ಅಖಿಲ ಭಾರತ ಓರಿ ಯಂಟಲ್ ಕಾನ್‌ಫರೆನ್ಸ್‌ನ 10ನೇ ಸಭೆಯಲ್ಲಿ ಓದಿದ ಭಾಷಣ:— "Karnataka in ancient Tamil literature" by Ramachandra Dixitar. Page 433—439.

*1 ಸಂಪ್ರದಾಯ ಗ್ರಂಥಗಳಲ್ಲಿ ಇವರ ಜನನ ಬಹು ಹಿಂದೆಯೆಂದು ಉಲ್ಲೇಖ ವಿದೆ. *2 ತಿರುಪತಿ ದೇವಸ್ಥಾನಗಳ ವರದಿ ಸಂಪುಟ 1ರಲ್ಲಿನ ಡಾ|| ಕೆ. ಎ. ನೀಲ ಕಂಠ ಶಾಸ್ತ್ರಿಗಳ ಮುನ್ನುಡಿ, ಪುಟ 5.

ತಿರುಪತಿ—Par excellence, ತಿರು—ಶ್ರೀ, ಶ್ರೇಷ್ಠ, ವೇಂಗಡಂ—ವೆಂಕಟರಮಣ.

"For the first time, the hill is associated with Vishnu in the phrase NEDIYON-KUNRAM of the SHILAPPADIKARAM (2nd Century A.D.) and in the beautiful lines in the KADUN-KANKADAI which portray the standing figure of Vishnu on the top of the high hill called VENGADAM. Tirupati holds an honoured place in the minds of VAISHNAVA-ALWARS. One of them, KULASHEKHARA, prays that he might be born again as a bird, a bush, a stream or something on the golden hill of VENGA-DAM. Another PEY ALWAR, describes how the kindly God of Tirumalai unites in himself the twin forms of Siva and Vishnu"

ತಿರುಮಲೆಯ ಅಡವಿಯಲ್ಲಿ ಒಂದು ಹಕ್ಕಿಯಾಗಿ, ಪೊದೆಯಾಗಿ, ಝರಿಯಾಗಿ, ಇಲ್ಲವೇ ಈ ಸುವರ್ಣ ಗಿರಿಯಲ್ಲಿ ಏನಾದರೊಂದಾಗಿ ಮತ್ತೆ ಹುಟ್ಟಲು ಹಂಬಲಿಸುತ್ತೇನೆಂದು, ಗಾನಪಾರವಶ್ಯರಾದ ಕುಲಶೇಖರ ಆಳ್ವಾರರು ಕೊಂಡಾಡಿರುವುದು; ಈ ಸ್ಥಳದ ಪಾವನತ್ವ, ರಮ್ಯತೆಯನ್ನು ಎತ್ತಿ ತೋರಿಸುತ್ತದೆ. ಈ ಸಂದರ್ಭದಲ್ಲಿ ಕನ್ನಡದ ಕವಿ ಪಂಪನ ಮಾತುಗಳನ್ನು ಇಲ್ಲಿ ಸ್ಮರಿಸುವುದು ಸಂದರ್ಭೋಚಿತವಾಗಿರುವುದು.

"ಚಾಗದ ಭೋಗದಕ್ಕರದ ಗೇಯದ ಗೊಟ್ಟಿಯಲಂಪಿನಿಂಪುಗ
ಳ್ಗಾಗರಮಾದ ಮಾನಿಸರೆ ಮಾನಿಸರಂತವರಾಗಿ ಪುಟ್ಟಲೇ
ನಾಗಿಯುಮೇನೊ ತೀರ್ದಪುದೆ ? ತೀರದೊಡಂ ಮರಿದುಂಬಿಯಾಗಿ ಮೇಣ್
ಕೋಗಿಲೆಯಾಗಿ ಪುಟ್ಟುವುದು ನಂದನದೊಳ್ ಬನವಾಸಿ ದೇಶದೊಳ್".

ಎಂದು ಕನ್ನಡ ನಾಡಿನ ಬಗೆಗೆ ನುಡಿದ ಮಾತುಗಳ ಬಗೆಗೆ ನೆನಪು ಓದುಗರಿಗೆ ಮರುಕಳಿಸುವಂತೆ ಮಾಡುತ್ತದೆ.

ಆಚಾರ್ಯ **ರಾಮಾನುಜಾಚಾರ್ಯರು** ಯಾತ್ರಾರ್ಥಿಗಳಾಗಿ ತಿರುಮಲೆಯ ಶ್ರೀನಿವಾಸನನ್ನೂ ದರ್ಶಿಸಿದ್ದರು ಎನ್ನುವ ಅಂಶವು, ಮತ್ತೊಂದು ಕುತೂಹಲದ ಅಂಶವಾಗಿರುವುದು.

ತಿರುಮಲೆಯಲ್ಲಿರುವ ಮಂದಿರ ಅತಿ ಪುರಾತನವಾದುದಾದರೂ, ಕಾಲ ಕಾಲಕ್ಕೆ ಅದರ ಭಕ್ತ ಕೋಟಿ ಗಣರಿಂದ ವಿಸ್ತರಣೆ, ಜೀರ್ಣೋದ್ಧಾರ, ಬದಲಾವಣೆ ಇತ್ಯಾದಿ ಕೃತಿಗಳು ನಡೆದಿರಬೇಕು. ಆದ್ದರಿಂದ ಇಂದು ಕಾಣುವ ಮಂದಿರವು, ಇತಿಹಾಸ ಯುಗದಲ್ಲಿ ನಿರ್ಮಿತವಾದ ಮಂದಿರವಾಗಿರಬೇಕು. *"The present structure is comparatively modern and dates from the 13th Century A.D."

ತಿರುಪತಿಯ ಮೂಲವಿಗ್ರಹ ಪ್ರತಿಷ್ಠಾಪನೆಯಾದ ಕಾಲ, ಮೂಲ ಮಂದಿರದ ಸ್ಥಾಪನೆ, ಇತ್ಯಾದಿ ವಿಷಯಗಳ ಬಗೆಗೆ ಪ್ರತ್ಯೇಕ ಅಧ್ಯಯನ ಅಗತ್ಯ. ಒಟ್ಟಿನಲ್ಲಿ ಇದೊಂದು ಪುರಾತನ ಭವ್ಯ ದೇವ ಮಂದಿರದಲ್ಲಿ ಒಂದು ಎಂಬುದು ನಿರ್ವಿವಾದಿತವಾದ ವಿಷಯ.

ಈ ಮೇಲೆ ಹೇಳಿದಂತೆ ಈ ಶಾಸನಗಳನ್ನು ಅವಲೋಕಿಸಿದರೆ, ಈ ದೇವ ಮಂದಿರಗಳು ಬೆಳವಣಿಗೆಯಾಗಲು, ಅಸಂಖ್ಯ ಭಕ್ತರು ಕೈಕೊಂಡ ಕಾರ್ಯಕ್ರಮಗಳು; ಅಂದಿನ ಸಾಮಾಜಿಕ ಧಾರ್ಮಿಕ ಹಿನ್ನೆಲೆ, ಯಾರು ಯಾರು ಎಂತಹ ದತ್ತಿಗಳನ್ನು ಯಾವ ಯಾವ ಸೇವಾ ಕಾರ್ಯಗಳಿಗಾಗಿ ನೀಡಿದರು, ಯಾರು ಎಂತೆಂತಹ ಸೇವೆಯಲ್ಲಿ ಸ್ವತಃ ತೊಡಗಿದ್ದರು, ಇತ್ಯಾದಿ ವಿಷಯಗಳ ಮೇಲೆ ಕ್ಷ–ಕಿರಣ ಬೀಳುವುದು.

ಈ ಹಿನ್ನೆಲೆಯಲ್ಲಿ **ಶಾತ್ತಾದ ಶ್ರೀ ವೈಷ್ಣವರು** ಈ ದೇವ ಮಂದಿರಗಳಲ್ಲಿ ಯಾವ ಕೈಂಕರ್ಯ ವೃತ್ತಿ ಕೈಕೊಂಡಿದ್ದರು, ಎಂತಹ ದತ್ತಿಗಳನ್ನು ನೀಡಿ

---

*Introduction by K.A. Neelakantha Sastry, University of Madras. REPORT on the Inscriptions of Tirumalai and Tirupati Devastanam, 1930. Page 5.

ದ್ದರು, ಅಂದು ಅವರ ಸಾಮಾಜಿಕ ಸ್ಥಾನಮಾನವೇನು; ಹೇಗೆ ಪರಮಾತ್ಮನ ಕೃಪೆಗೆ ಮತ್ತು ಜನತೆಯ ಮೆಚ್ಚುಗೆಗೆ ಪಾತ್ರರಾಗಿದ್ದರು ಎನ್ನುವುದರ ಬಗೆಗೆ ಸಾಕಷ್ಟು ಬೆಳಕು ಬೀಳುವುದು.

*ತಿರುಮಂಜನಂ : "A few records mention a daily ತಿರುಮಂಜನಂ or ಅಭಿಷೇಕಂ for Sri Venkateswara at Tirumala, and for Sri Govindaraja at Tirupati. The earliest reference occurs in No. 4—T.T dated in ಶಕ 1386, when **Kandadai Ramanuja Iyengar** arranged, as his service (ಕೈಂಕರ್ಯ) for the ಅಲಗಪ್ಪಿ ರಾನಾರ್—ತಿರುಮಂಜನಂ conducted daily for Sri Venkateswara, for the supply of perfumery to the temple through his ಏಕಾಕಿ (i.e. unmarried) disciples of the ಶಾತ್ತಾದ ಶ್ರೀ ವೈಷ್ಣವ sect. The perfumery consisted of ಮೋಡಿತ್ತ-ಶಾತ್ತುಪ್ಪಡಿ or ಚಂದನಂ (Sandal-paste), ಮಂಜಲ್-ಕಾಪ್ಪು (Turmeric), ನೆಲ್ಲಿ-ಕಾಪ್ಪು (Emblic myrobalan), ಕಸ್ತೂರಿ-ಕಾಪ್ಪು (musk) and ಕರ್ಪೂರ ಕಾಪ್ಪು or ಪಚ್ಚಕರ್ಪೂರಂ (refined camphor), and along with these, a small cloth and betel-leaves and nuts were supplied by them".

"The ಶಾತ್ತಾದ ಏಕಾಕಿ Sri Vaishnavas were enjoyed by their ಗುರು to be present for the ತಿರು ಮಂಜನಂ and look to its proper conduct daily. On its completion, after an honourable mention of

---

***Sub-Head:— Tirumanjanam, Abhishekam =(holi bath). Tirupati Devastanam Epigraphical Report, Vol. 1, Page 16.**

their Guru's name, the disciples were bidden to bring back to him 4 betel leaves and 4 nuts".

*ಇದೇ ರೀತಿ ಅಲಗಪ್ಪಿರಾನಾರ್—ತಿರುಮಂಜನಂನ ಉಲ್ಲೇಖವು, ಶಕ 1406 ರ ತಿರುಪತಿ-ತಿರುಮಲ್ಲೈನ ಶಾಸನ ನಂಬರು 163 ರಲ್ಲೂ ಬಂದಿದೆ. ಈ ಶಾಸನದಂತೆ ಈ ದತ್ತಿಯ ಕರ್ತೃ, **ಕಂದಾಡೈ ರಾಮಾನುಜಯ್ಯಂಗಾರ್‌ರವರಾಗಿದ್ದಾರೆ.** ಈ ಶಾಸನದಂತೆ ತಿರುಪತಿಯ ಗೋವಿಂದರಾಜನಿಗೂ, ತಿರುಮಲೆಯ ವೆಂಕಟೇಶ್ವರನಿಗೂ ಸಲ್ಲಿಸುವ ತಿರುಮಂಗಲುಡನ್ವರುವರ್-ತಿರುಮಂಜನ, ಕುಲಶೇಖರಪ್ಪೆರುಮಾಳ್ ತಿರುವಾರಾಧನಂ ಎನ್ನುವ ನೈವೇದ್ಯ, ಕರ್ಪೂರದಾರತಿ, ಗೋವಿಂದರಾಜಸ್ವಾಮಿಗೆ ಪರಿವಟ್ಟಂ ಎನ್ನುವ ವಸ್ತ್ರ ನೀಡುವಿಕೆ; ಇತ್ಯಾದಿ ಕೈಂಕರ್ಯಗಳ ಉಲ್ಲೇಖವಿದೆ.

ಅದೇ ತಿರುಮಲ್ಲೈ ವೆಂಕಟೇಶ್ವರ ದೇವಸ್ಥಾನದ 163ನೇ ಶಾಸನದಂತೆ ಸಾಳುವ ನರಸಿಂಹರಾಜನು (ವಿಜಯನಗರದ ದೊರೆ) "ಗುಂಡಿ-ಪುಂಡಿ" ಎಂಬ ಗ್ರಾಮವನ್ನು **ರಾಮಾನುಜ ಕೂಟ**ದ ನಿರ್ವಹಣೆಗೂ, ಆ ಗ್ರಾಮದ ಆದಾಯದ ಕೆಲವಂಶವನ್ನು ತಿರುಮಂಜನದ ಕೈಂಕರ್ಯಕ್ಕೂ ಬಳಸಿಕೊಳ್ಳುವುದಕ್ಕೆ ಬಿಟ್ಟುಕೊಟ್ಟ ಉಲ್ಲೇಖವಿದೆ.

ಆದರೆ ತಿರುಪತಿ-ತಿರುಮಲ್ಲೈ ವೆಂಕಟೇಶ್ವರನ 4ನೇ ಶಾಸನದಂತೆ (163ನೇ ಶಾಸನದಕ್ಕಿಂತ ಮುಂಚಿನದು) ಈ ಗ್ರಾಮದ ಉಲ್ಲೇಖ, ರಾಮಾನುಜ ಕೂಟಂನಿಂದ ಬಡಗಣೆಯಾಗಬೇಕಾದ ಪೂಜಾ ಸಾಮಗ್ರಿಯಗಳ ವಿಚಾರ ಕಾಣಬರುತ್ತಿಲ್ಲ. ಇದೊಂದು ಅಚ್ಚರಿಯಾದ ಸಂಗತಿ.

"**The next reference to it occurs in No. 336-T.T. dated in ಶಕ 1418, wherein ಕಂದಾಡೈ ಅಪ್ಪಚ್ಚಿಯಾರ್

---

*T.D. E. Report – P P. 16—17

**T.D E. Report. P. 18

ಅಲ್ಲದೆ ಇಲ್ಲಿ ಅನೇಕ ಸಾರಿ ಬರುವ "ಕಂಡಾಡೈ" ಎಂಬುದು ಅವರ ವಂಶವೇ, ಅದೊಂದು ಗ್ರಾಮವೇ ಅಥವ ಇನ್ನೇನಾದರೂ ಆಗಿದೆಯೋ ಎನ್ನುವುದರ ಬಗೆಗೆ ಹೆಚ್ಚಿನ ಸಂಶೋಧನೆ ಅಗತ್ಯ—ಸಂಪಾದಕ.

ಅಣ್ಣ provided on the Friday occuring once in 15 days, which happened to be the day of ಪುಲುಗು ಕಾಪ್ಪು ಮುರ್ತ್ತಿ for Sri Venkateswara, for the recitation of the ಉಲಾ, a species of poem, in praise of **ಕಂದಾಡೈ ರಾಮಾನುಜಯ್ಯಂಗಾರ್** and for the offering of two ಅತಿರಸಪ್ಪಡಿ for the deity at the time of anointment with ಪುಲುಗು-ಕಾಪ್ಪು", ಇತ್ಯಾದಿ.

ಈ ಮೇಲಿನ ಉಲ್ಲೇಖಗಳಿಂದ **ಕಂದಾಡೈ ರಾಮಾನುಜಯ್ಯಂಗಾರ್** ರವರು ಒಬ್ಬ ಮಹಾನ್ ವ್ಯಕ್ತಿಗಳೆಂದು, ತಿರುಪತಿ ವೆಂಕಟರಮಣನ ಸೇವೆಗೆ ತಮ್ಮನ್ನೇ ಅರ್ಪಿಸಿಕೊಂಡ ಅನೇಕಾನೇಕ ಮಂದಿ ಭಕ್ತ ಶಿರೋಮಣಿಗಳಲ್ಲಿ, ಓರ್ವ ಗಣ್ಯ ವ್ಯಕ್ತಿಯೆಂದು ಕಂಡು ಬರುವುದು.

**ನಂದನ ವನಗಳು** : ಆಧುನಿಕ ಜಗತ್ತಿನಲ್ಲಿ ಪ್ರತಿ ದಿನವೂ ಸಂಪರ್ಕ ಸಾಧನಗಳು ಬೆಳೆಯುತ್ತಿರುವ ಇಂದಿನ ದಿನಗಳಿಗಿಂತ, ಹಿಂದಿನ ದಿನಗಳ ರೀತಿ ನೀತಿಗಳೇ ಬೇರೆಯಾಗಿದ್ದಿರಬೇಕು. ತಿರುಪತಿಯ ವೆಂಕಟರಮಣನಿಗೆ ಪ್ರತಿ ನಿತ್ಯವೂ ಅಗತ್ಯವಾದ ಹೂಗಳು; ವಿಶೇಷ ದಿನಗಳ ಬಳಕೆಗೆ, ಅಲಂಕಾರಕ್ಕೆ ಬೇಕಾದ ಹೂಗಳು, ಅವುಗಳ ಒದಗಣೆ ಇಂದಿಗಿಂತ ಹಿಂದೆ ಕಷ್ಟತರವಾಗಿದ್ದವು. ಆದ್ದರಿಂದ ಅಂದು ಅನೇಕ ಭಕ್ತರು ಬೆಟ್ಟದ ಮೇಲೆಯೇ ನಂದನ ವನಗಳನ್ನು (ಹೂ-ತೋಟ) ನಿರ್ಮಿಸಿ, ಸದಾ ಕಾಲವೂ ಸಾಕಷ್ಟು ಪ್ರಮಾಣದಲ್ಲಿ ಬಗೆ ಬಗೆಯ ಹೂಗಳು ಒದಗುವಂತೆ ಮಾಡಿದ ವ್ಯವಸ್ಥೆಯ ಉಲ್ಲೇಖ ಹಲವಾರು ಕಡೆ ಈ ಶಾಸನಗಳಲ್ಲಿ ಕಾಣಬರುವುದು. *"Each garden was in-charge of a manager who usually supervised it and took work from the gardeners. The workers were generally paid from 3 to 6 ಪಣಂ each

*T.D.E. Report Page 31.

ಅಲ್ಲದೆ ತಿರುಮಲೆಯ 698ನೇ ಶಾಸನದಂತೆ ಶಾತ್ತಾದ ಶ್ರೀ ವೈಷ್ಣವರು ಹೂತೋಟಗಾರರು ಎಂದಿದೆ. T.D. Ins. Vol. V.P.P. 56-57 ಸಂಪಾದಕ.

month for their labour, while the manager, it would appear, held an honorary charge."

ಅನೇಕ ಸಂದರ್ಭದಲ್ಲಿ, ಭಕ್ತರು ಈ ಹೂ ತೋಟಗಳನ್ನು ನಿರ್ಮಾಣ ಮಾಡಿ, ಅವುಗಳಲ್ಲಿ ಒಂದೊಂದು ಮಂಟಪವನ್ನೂ ಕಟ್ಟಿಸಿ, ಇಡೀ ತೋಟವನ್ನು ದೇವಸ್ಥಾನದ ಖಜಾನೆಯ ಲೆಕ್ಕಕ್ಕೆ ಒಪ್ಪಿಸುತ್ತಿದ್ದರು. ತೋಟಗಳಲ್ಲಿ ನಿತ್ಯ ಸೇವೆಮಾಡುವ ಕೆಲಸಗಾರರಿಗೆ ಮಾಸಿಕ ವೇತನದ ವ್ಯವಸ್ಥೆಯನ್ನೂ ದಾನಿಗಳು ಮಾಡಿರುತ್ತಿದ್ದರು. ಇಲ್ಲವೇ ಪ್ರಸಾದದ ಕೊಂಚ ಭಾಗವು ಇವರಿಗೆ ಸಲ್ಲತಕ್ಕದ್ದೆಂದು ವ್ಯವಸ್ಥೆ ಮಾಡಿರುತ್ತಿದ್ದರು.

ಇದರಿಂದ ವೆಂಕಟರಮಣಸ್ವಾಮಿಗೆ ಅಗತ್ಯವಾದ ಹೂ ಒದಗಣೆಯು ನಿತ್ಯವೂ ಜರುಗುತ್ತಿತ್ತೆಂದು ಈ ಶಾಸನಗಳಲ್ಲಿ ಕಂಡುಬರುವುದು.

*(1) "It seems very likely that these gardens were in many cases cultivated by **ಶಾತ್ತಾದ ಶ್ರೀ ವೈಷ್ಣವಾ**(ಸ್), who are even at the present day under the name of ದಾಸನಂಬೀ(ಸ್) carrying on the service of making flower garlands in the Tirupati Temple (Nos. 197 and 200 T.T.)"...............

ಇದರಿಂದ **ಶಾತ್ತಾದ ಶ್ರೀ ವೈಷ್ಣವ**ರಲ್ಲಿ ಕೆಲವರು ಭಗವಂತನ ಅರ್ಚನೆಗೆ ಅಗತ್ಯವಾದ ಪುಷ್ಪಗಳನ್ನು ಬೆಳೆಯುವ, ಅವುಗಳ ಮಾಲೆಯನ್ನು ನಿರ್ಮಿಸುವ ಒಂದು ಪವಿತ್ರ ಕೈಂಕರ್ಯದಲ್ಲಿ ತೊಡಗಿರುತ್ತಿದ್ದರೆಂದು ಗಮನಿಸಬಹುದು.

---

[ಶಾತ್ತಾದ ಶ್ರೀ ವೈಷ್ಣವರಿಗೆ ನವೀನ ಹೆಸರು "ದಾಸನಂಬಿ"ಗಳು ಎಂದಿದೆ. ಆಧಾರ T. D. Inscriptions Vol. V P 11 ನೋಡಿ.]

ಇಲ್ಲಿ ಒಂದು ಮಾತು. ಇತ್ತೀಚಿನ ಲೋಕಾಭಿಪ್ರಾಯದಂತೆ * "ನಂಬಿ" ಎಂದರೆ ಶಾತ್ತಾದ ಶ್ರೀ ವೈಷ್ಣವರು ಎನ್ನುವ ಅಭಿಪ್ರಾಯವಿರುವಂತೆ ಕಾಣುವುದು. ತಿರುಪತಿಯ ಗೋವಿಂದರಾಜಸ್ವಾಮಿ ದೇವಸ್ಥಾನದ ಶಿಲಾ ಶಾಸನ ನಂ. 288 ರ * (2) ಶಾತ್ತಾದವರನ್ನು ದಾಸ ನಂಬಿಗಳು ಎಂದು * (3) ಶಾತ್ತನಂಬಿ

ಗಳು ಎಂದೂ (4) *ದಾಸನಂಬಿನೂರರೂ ಎಂದೂ ಅವರಣದಲ್ಲಿ ತೋರಿಸಿದೆ. ಆದರೆ 'ನಂಬಿ' ಎಂಬ ಪದ ಆಚಾರ್ಯ ರಾಮಾನುಜರ ಕಾಲ, ಮತ್ತು ಅದಕ್ಕೂ ಹಿಂದೆ ಇದ್ದ ಯಾಮುನಾಚಾರ್ಯರ ಕಾಲದಿಂದಲೂ ಜನಗಳು ತಮ್ಮ ಹೆಸರಿನ ಕೊನೆಯಲ್ಲಿ'ನಂಬಿ' ಎಂಬ ಪದವನ್ನು ಜೋಡಿಸಿಕೊಳ್ಳುತ್ತಿದ್ದರು. ಉದಾಹರಣೆಗೆ ಯಾಮುನಾಚಾರ್ಯರಿಗೆ ಗುರುಗಳೋಪಾದಿಯಲ್ಲಿ ಇದ್ದವರು (1) ರಾಮಮಿಶ್ರ ಅಥವ ಮಣಕ್ಕಾಲ ನಂಬಿಗಳು (2) ಮತ್ತು ಯಾಮುನರ ಪ್ರಮುಖ ಶಿಷ್ಯರಲ್ಲಿ ಅತಿಮುಖ್ಯರಾದವರು ಪೆರಿಯ ತಿರುಮಲೈ ನಂಬಿ ಅಥವಾ ಶ್ರೀ ಶೈಲಪೂರ್ಣ ಮತ್ತು (3)ತಿರುಕ್ಕೊಟ್ಟಿಯೂರ್ ನಂಬಿಗಳು. ಆಚಾರ್ಯ ರಾಮಾನುಜರಿಗೆ ಗುರುಗಳೋಪಾದಿಯಲ್ಲಿ ಶ್ರೀ ವರರಂಗ ಎನ್ನುವವರು ಇದ್ದರು. ಇವರು ತಮ್ಮ ಶಿಷ್ಯನ (ರಾಮಾನುಜ) ಪ್ರಭಾವ ನೋಡಿ ಸಂತೋಷಪಟ್ಟು ತನ್ನ ತಮ್ಮಂದಿರಾದ (4)ಚೋಟಿನಂಬಿಗಳನ್ನು ರಾಮಾನುಜರಲ್ಲಿ ಶಿಷ್ಯರಾಗಿ ಬಿಡುತ್ತಾರೆ

ಆದ್ದರಿಂದ 'ನಂಬಿ' ಎನ್ನುವ ಪದ ಕೇವಲ ಶಾತ್ತಾದ ಶ್ರೀವೈಷ್ಣವರಿಗೆ ಮಾತ್ರ ಎನ್ನುವ ಸಾಮಾನ್ಯ ಭಾವನೆ ಸಾಧುವಲ್ಲ. ಮತ್ತು ವಿಶಿಷ್ಟಾದ್ವೈತ ಸಿದ್ಧಾಂತದ ಪ್ರಕಾರವಾಗಿ "ಭಗವಾನ್, ಭಾಗವತ ಮತ್ತು ಭಕ್ತ"ರ ನಡುವೆ ಏನೂ ಅಂತರವಿಲ್ಲ. ಭಕ್ತರ, ಭಾಗವತರ (ಭಗವಂತನ ನಾಮ ಸಂಕೀರ್ತನೆಯಲ್ಲೇ ತೊಡಗಿರುವವರು) ಸೇವೆಯೇ ಭಗವಂತನ ಸೇವೆ. ಆಚಾರ್ಯ ರಾಮಾನುಜರು ಬೋಧಿಸಿದ ಅನೇಕ ತತ್ವಗಳಲ್ಲಿ ಇದೂ ಒಂದು. ಆದ್ದರಿಂದ ಇಂತಹವರ ನಿಷ್ಕಾಮಸೇವೆಯೇ ಭಗವಂತನ ಕೈಂಕರ್ಯ. ಅದಕ್ಕೆ ದಾಸ್ಯ ವೃತ್ತಿ ಬೇಕು, ಶ್ರೀರಾಮನಿಗೆ ಹನುಮಂತ, ಭಗವಾನ್ ಬುದ್ಧನಿಗೆ ಆನಂದನಂತೆ, ಆಚಾರ್ಯ ರಾಮಾನುಜರಿಗೆ (5) ಆಂಧ್ರ ಪೂರ್ಣನಂತೆ (ಹಾಸನ ಜಿಲ್ಲೆಯ ಸಾಲಿಗ್ರಾಮ ಊರಿನ ನಿವಾಸಿ) ಮತ್ತು ಗೋವಿಂದ ಹಾಗೂ ಕೂರೇಶನಂತೆ ಸ್ವೇಚ್ಛೆಯಿಂದ ಅವರ ಸೇವೆ ಮಾಡುವ ವೃತ್ತಿಗೆ ದಾಸ್ಯತನ ಬೇಕು. ಅಂತಹ ದಾಸ್ಯತನವನ್ನು ಸ್ವಯಂಪ್ರೇರಣೆಯಿಂದ ಅರ್ಪಿಸುವವನು ದಾಸ.

---

*1. T.D.E. Report. P. 31

*2. Tirupati Devastanam Inscriptions. Vol. III. P. 107

*3. Tirupati Devastanam Inscriptions. Vol. IV P. 136 (T.T. No. 547)

*4. T.D. Inscriptions Vol. V P. 79 (G.T. 48)

1. Life of Sri Ramanuja, by Swamy Ramakrishnananda, Sri Ramakrishna Math (Mylapore) Madras Publication 1959. P.P. 47—48.

ಆದ್ದರಿಂದ ಇಂತಹ ನಮ್ರವಾದುದೂ, ಭಕ್ತಿಯುತವಾದುದೂ ಆದ ವಿಷಯವು ತನಗೆ ಪ್ರತಿ ದಿನವೂ ನೆನಪು ಮಾಡಿಕೊಡುತ್ತಿರಲೆಂದು, ಆ ಶರಣನತನ ಎಚ್ಚರಿಸುತ್ತಿರಲೆಂದು, ಭಕ್ತರಾದ ತಂದೆ ತಾಯಿಗಳು; ತಮ್ಮ ಮಕ್ಕಳ ಹೆಸರಿನ ಕೊನೆಗೆ 'ನಂಬಿ' ಎಂದು, 'ದಾಸ ನಂಬಿ' ಎಂದು ಸೇರಿಸಿ ಕರೆಯುತ್ತಿದ್ದರು. ನಂಬಿಮಾರ್‌ರವರಿಗೆ ದೇವಸ್ಥಾನದ ಅರ್ಚಕರು ಎಂದು ಕೆಲವು ಶಾಸನಗಳಲ್ಲಿ ಉಲ್ಲೇಖವೂ ಇದೆ.

ಹಾಗೆಯೇ ಕಂದಾಡೈ ರಾಮಾನುಜಯ್ಯಂಗಾರ್‌ರವರಿಗೆ, ಕಂದಾಡೈ ರಾಮಾನುಜ ದಾಸ ಎಂಬ ಹೆಸರೂ ಇತ್ತು ಎಂಬುದನ್ನು ಇಲ್ಲಿ ನೆನೆಸಿಕೊಳ್ಳಬಹುದು. ತಮಿಳು ನಾಡಿನ ವೈಷ್ಣವ ಭಕ್ತರನ್ನು ನಂಬಿಮಾರರೆಂದೂ, ಶೈವ ಭಕ್ತರನ್ನು ನಾಯನ್ಮಾರರೆಂದೂ ಇಂದೂ ಕರೆಯುವ ಪರಿಪಾಠವಿದೆ.

## ರಾಮಾನುಜ ಕೂಟಗಳು

ಭಗವದ್ಭಕ್ತರು ತಿರುಪತಿ, ತಿರುಮಲೈನಂತಹ ದಿವ್ಯ ಕ್ಷೇತ್ರಗಳಿಗೆ ಯಾತ್ರಾರ್ಥಿಗಳಾಗಿ ಆಗಮಿಸಿದಾಗ, ಅವರಿಗೆ ಊಟವನ್ನು ಒದಗಿಸುವ ಒಂದು ವ್ಯವಸ್ಥೆಯು ಬಹಳ ಹಿಂದಿನ ಕಾಲದಿಂದಲೂ ಇದ್ದಿತೆಂದು ಕಾಣುತ್ತದೆ. ಈ ಸೇವಾಕಾರ್ಯಗಳನ್ನು **ರಾಮಾನುಜ ಕೂಟ** ಎಂಬ ಹೆಸರಿನಿಂದ ವ್ಯವಸ್ಥೆ ಮಾಡಲಾಗುತ್ತಿತ್ತು. ಶಾಲಿವಾಹನ ಶಕ 939 ರಲ್ಲಿ ಜನಿಸಿ, ಅದೇ ಶಕ 1059 ರಲ್ಲಿ ಐಕ್ಯರಾದ **ಭಗವಾನ್ ರಾಮಾನುಜರ** ದಿವ್ಯ ಹೆಸರಿನಲ್ಲಿ ಈ ರಾಮಾನುಜ ಕೂಟಗಳು ನಿರ್ಮಾಣಗೊಂಡವು. [ಶಾಲಿವಾಹನ ಶಕೆಗೆ 78 ವರ್ಷಗಳನ್ನು ಸೇರಿಸಿದರೆ, ಕ್ರಿಸ್ತಶಕೆಯ ವರುಷ ನಿರ್ಣಯವಾಗುವುದು. ಅದರಂತೆ ಆಚಾರ್ಯ ರಾಮಾನುಜರು 1017 ರಲ್ಲಿ ಹುಟ್ಟಿ 1137 ರಲ್ಲಿ ಅಮರರಾದರು ಎಂದು ನಿರ್ಣಯಿಸಬಹುದು] ಹೀಗೆ 11 ನೇ ಶತಮಾನದಿಂದ,

---

(10ನೇ ಪುಟಕ್ಕೆ) 2. Life of Sri Ramanuja P. 71.

3. Same book P. 113.

4. Same book P. 158.

5. Same book P. 214 and 237.

12 ನೇ ಶತಮಾನದ ಪೂರ್ವಭಾಗದವರೆಗೆ ಉಜ್ವಲ ಜೀವನ ನಡೆಸಿದ, ಮತ್ತು ಚಿರಸ್ಮರಣೀಯವಾದ ಜ್ಞಾನ ನಂದಾದೀವಿಗೆಯನ್ನು ಬೆಳಗಿಸಿದ ಆ ಪುಣ್ಯ ಪುರುಷನ ನೆನಪಿನಲ್ಲಿ, **ರಾಮಾನುಜ ಕೂಟ**ಗಳನ್ನು ಸ್ಥಾಪಿಸಿ ನಡೆಸಿಕೊಂಡು ಬಂದಿರುವುದು ಒಂದು ಅಪೂರ್ವ ವಿಚಾರ. ಇಂತಹ ರಾಮಾನುಜ ಕೂಟಗಳ ನಿರ್ವಹಣೆಯ ಗುರುತರ ಹೊಣೆ, ***ಕಂದಾಡೈ ರಾಮಾನುಜಯ್ಯಂಗಾರ್** ರವರಿಗೆ ವಹಿಸಲಾಗಿತ್ತು ಎನ್ನುವ ಅಂಶವೂ ಗಮನಾರ್ಹ.

ರಾಮಾನುಜ ಕೂಟದಂತಹ ವ್ಯವಸ್ಥೆ ಪ್ರಾರಂಭವಾಗುವ ಮುನ್ನ ಇದ್ದಂತಹ ವ್ಯವಸ್ಥೆ ಹೇಗಿತ್ತು ಎನ್ನುವುದರ ಬಗೆಗೆ ಶಾಸನಗಳಲ್ಲಿ ಉಲ್ಲೇಖ ದೊರಕುತ್ತದೆ:- (1)"....These are effected in their own houses, or carried on, through feeding houses established for the purpose, or through the agency of existing public religious institutions; such as Mathas (ಮಠಗಳು) and Alayas (ಆಲಯಗಳು) according to the convenience, intention, and capacity of the donors." ಇತ್ಯಾದಿ ಹಿನ್ನೆಲೆಯ ಅಂಶಗಳು ಈ ದೇವಸ್ಥಾನಗಳ ಶಾಸನ ಸಂಗ್ರಹಗಳಿಂದ ನಿರ್ವಚನವಾಗುತ್ತದೆ. ಅಲ್ಲದೆ ಮುಂದೆ ಮುಂದೆ ಇಂತಹ ರಾಮಾನುಜ ಕೂಟಗಳ ನಿರ್ವಹಣೆಯನ್ನು ಭಕ್ತ ಬಾಂಧವರು ಅತಿ ಸಮರ್ಥರಾದ **ಸ್ಥಾನತ್ತಾರ್** ರವರಿಗೆ (Managers of the temple) ನೀಡುತ್ತಿರುವುದೂ ಕಂಡು ಬಂದಿದೆ.

ಈ ರೀತಿ ಭಗವದ್ಭಕ್ತರಿಗೆ ಉಚಿತವಾಗಿ ಪ್ರಸಾದ ಸಂತರ್ಪಣೆ ಮಾಡುವ ಪರಿಪಾಠ, ಪಾನಕ ಪಣ್ಯಾರಗಳ ಪೂರೈಕೆ, ರಾಮಾನುಜಾಚಾರ್ಯರಿಗಿಂತ ಹಿಂದಿನಿಂದಲೂ ಇತ್ತು ಎಂಬುದಕ್ಕೆ–**ಗೋವಿಂದರಾಜಸ್ವಾಮಿ** ದೇವಸ್ಥಾನದ 220 ನೇ ಶಾಸನದಲ್ಲಿ–ಪ್ರಪ್ರಥಮ ಕುರುಹಾಗಿ ಕಂಡುಬಂದಿದೆ. (2) ಹತ್ತನೇ

---

1 T. D. E. Report P. 45.
2 " P. 46. G. T. 220

ಶತಮಾನದ ಆದಿಯಲ್ಲಿದ್ದನೆಂದು ಭಾವಿಸಲಾಗುವ **ಇರುನ್ ಗೋಲಕ್ಕಾನ್** ಅಥವ **ಗುಣವಾನ್ ಅಪರಾಜಿತಾನ್** ಎಂಬ ಭಕ್ತ, ಪ್ರತಿದಿನವೂ ಇಬ್ಬರು ಬ್ರಾಹ್ಮಣ ಯಾತ್ರಾರ್ಥಿಗಳಿಗೆ ಎರಡು ಪ್ರಸಾದ (ಊಟ) ಗಳನ್ನು ನೀಡುವ ವ್ಯವಸ್ಥೆ ಮಾಡಿದ್ದನೆನ್ನುವ ಅತಿ ಮೊದಲ ಸೂಚನೆ ಕಂಡುಬಂದಿದೆ.

ಇದೇ ಮುಂದೆ **ಭಗವಾನ್ ರಾಮಾನುಜಾಚಾರ್ಯರ** ದಿವ್ಯ ಹೆಸರಿನಿಂದ **ರಾಮಾನುಜ ಕೂಟ** ಎಂಬ ಅಭಿನಾಮದಿಂದ ಒಂದು ಸು-ವ್ಯವಸ್ಥೆಯಾಗಿ ನಡೆಯುಕೊಂಡು ಬಂದಿರಬೇಕೆಂದು ಊಹಿಸಬಹುದು.

(1) ಇಂತಹ ವ್ಯವಸ್ಥೆಯು ಸ್ಪಷ್ಟವಾಗಿ ಇತ್ತು ಎನ್ನುವುದನ್ನು ತಿರುಮಲೈ ದೇವಸ್ಥಾನದ ಶಾಸನ 195 (14 ನೇ ಶತಮಾನ), ಗೋವಿಂದರಾಜಸ್ವಾಮಿ ದೇವಸ್ಥಾನದ 51 ನೇ ಶಾಸನ (ಶಾಲಿವಾಹನ ಶಕ 1230 ಅಥವ ಕ್ರಿ. ಶ. 1308), ಅದೇ ದೇವಸ್ಥಾನದ 20 ನೇ ಶಾಸನ, ಇತ್ಯಾದಿಗಳು ಮತ್ತಷ್ಟು ದೃಢೀಕರಿಸುತ್ತವೆ.

ಮೊದಮೊದಲು ಇವುಗಳು ದೇವಸ್ಥಾನದ ವ್ಯವಸ್ಥೆಗೆ ಒಳಪಡದೆ ಪ್ರತ್ಯೇಕವಾಗಿ ಭಕ್ತರಿಂದಲೇ ನಡೆಸಲ್ಪಡುತ್ತಿದ್ದಿರಬಹುದು. (2) "The original credit for instituting a separate **ರಾಮಾನುಜ ಕೂಟಂ**, or free feeding-house with an organisation of its own, quite unconnected with the authorities of the temple, belongs to (3) ಸಾಳುವ ನರಸಿಂಹದೇವ ಮಹಾರಾಯ, son of ಸಾಳುವ ಗುಂಡದೇವ ಮಹಾರಾಜ, who built **ರಾಮಾನುಜ ಕೂಟಂ** both at Tirumala and at Tirupati

---

1 T. D. E. Report P. 46.

2 " P. 46-47.

3 ಈತನ ಕಾಲ ಕ್ರಿ. ಶ. 1445 ರಿಂದ 1504. ಈತನು 59 ವರ್ಷ ಬದುಕಿದ್ದ. ಈತನ ತಂದೆ ಪೂರನೇ ಗುಂಡ, ತಾಯಿ ಮಲ್ಲಾಂಬಿಕೆ. T.D.E. Glossary, Page 18, Table 19.

**and placed them under the management of** ಕಂದಾಡೈ ರಾಮಾನುಜಯ್ಯಂಗಾರ್. The exact date of their institution is not explicitly mentioned, but innumerable references to them abound, dating from ಶಕ 1378 (ಕ್ರಿ. ಶ. 1456), corresponding to the cyclic year ಧಾತು, to the year ಚಿತ್ರಭಾನು corresponding probably to ಶಕ 1444 (ಕ್ರಿ.ಶ. 1522). The one at Tirumala was located in the ಸನ್ನಿಧಿ street, while the other in Tirupati was probably within the temple premises. Besides this one at Tirumala **founded in the ಸನ್ನಿಧಿ street under the management of** ಕಂದಾಡೈ ರಾಮಾನುಜಯ್ಯಂಗಾರ್ we find another feeding-house, a ಸತ್ರಂ(ತಿರುಮಲೈ ದೇವಸ್ಥಾನದ ಶಾಸನ ನಂ. 66), also established and provided for by ಸಾಳುವ ನರಸಿಂಹ ದೇವ ಮಹರಾಯ at the ಗೋಪುರಂ, built by him at Tirumala, and placed under the control (ಅಧಿಪತ್ಯಂ) of one ಹಸ್ತಿಗಿರಿ—ಅಯ್ಯನ್. The fact that the former is designated ರಾಮಾನುಜಕೂಟಂ and placed in the ಸನ್ನಿಧಿ street - or in the north street under the supervision of ಕಂದಾಡೈ ರಾಮಾನುಜಯ್ಯಂಗಾರ್, **a prominent Vaishnava leader of the place,** while the latter is only termed ಸತ್ರಂ (ಛತ್ರ) is located at the ಗೋಪುರಂ or tower and is referred to as being managed by one ಹಸ್ತಿಗಿರಿ-ಅಯ್ಯನ್, probably indicates **that the first was intended exclusively for persons of the ವೈಷ್ಣವ** sect (compare No 54 T. T. for srivaishnavas) and the second ostensibly for non-Vaishnavas."

ರಾಜ್ಯಗಳ ಅಭಿವೃದ್ಧಿಯೂ ಏರಿಳಿತಗಳಿಗೆ ಸಿಕ್ಕುವಂತೆಯೇ, ಧಾರ್ಮಿಕ ಸಾಮ್ರಾಜ್ಯವೂ ಈ ಏರಿಳಿತಗಳಿಂದ ಹೊರಗಾಗಲು ಸಾಧ್ಯವಾಗಿಲ್ಲ ಎನ್ನುವುದಕ್ಕೆ ಇದೊಂದು ಸಾಕ್ಷಿ. **ಭಗವಾನ್, ಭಾಗವತ ಮತ್ತು ಭಕ್ತರ** ನಡುವೆ ಏನೂ ಅಂತರವಿಲ್ಲ. ಈ ಸೀಮೆಯಲ್ಲಿ ಕುಲ-ಗೋತ್ರಗಳ ಕೊಕ್ಕೆಯಿಲ್ಲ. ಭಕ್ತರು ಜಾತ್ಯತೀತರು ಇತ್ಯಾದಿಯಾಗಿ 11–12ನೇ ಶತಮಾನದಲ್ಲಿ **ಮಹದಾಚಾರ್ಯ ರಾಮಾನುಜ**ರು ಬೋಧಿಸಿದ ಉಚ್ಚ ತತ್ವ; ಆಗಲೇ ಕೊಂಚ ಮಸುಕಾಗಿ, ಇದು ಶ್ರೀ ವೈಷ್ಣವರ ಅನ್ನಸತ್ರ ಇದು ಇತರೆಯವರಿಗೆ ತೆರೆದ ಅನ್ನಸತ್ರ ಎನ್ನುವ ಭೇದ ಬುದ್ಧಿ, ಮತ್ತೆ ತುಸ ಚಿಗಿತುಕೊಂಡಿರಬಹುದು. ಈ ಭೇದ ಬುದ್ಧಿ, ಭಗವಾನ್ ರಾಮಾನುಜರು ಅಂತ್ಯವಾದ 300–350 ವರುಷಗಳ ನಂತರ, ಸ್ವಯೂಥರಲ್ಲಿಯೇ ಮೊಳಕೆಯಾಗಿರುವ ಅಂಶವನ್ನು ಇಲ್ಲಿ ಗಮನಿಸಬಹುದು.

ಅಲ್ಲದೆ ಶ್ರೀ ವೈಷ್ಣವರ ರಾಮಾನುಜ ಕೂಟಂ ನ ಮೇಲ್ವಿಚಾರಣೆಯ ಕೆಲಸವನ್ನು ವಿಜಯನಗರದ ಅರಸನಾದ ಸಾಳುವ ನರಸಿಂಹದೇವರಾಯನು **ಕಂದಾಡೈ ರಾಮಾನುಜಯ್ಯಂಗಾರ್** ಎನ್ನುವ ಸಮರ್ಥ ಧಾರ್ಮಿಕ ಮುಂದಾಳುಗಳ ಕೈಯಲ್ಲಿ ನೀಡಿದ್ದನೆನ್ನುವುದು, ಇನ್ನೊಂದು ಗಮನಾರ್ಹ ಸಂಗತಿ. ರಾಜನಿಗೆ ಇವರಲ್ಲಿಟ್ಟ ಭಕ್ತಿ, ಗೌರವ; ಈ ಭಕ್ತರು ರಾಜನಮೇಲೆ ಬೀರಿದ್ದ ಸತ್ ಪ್ರಭಾವ, ಅದರ ಗಹನತೆಯನ್ನು ಅರಿಯುವುದರಲ್ಲಿ ಬಹಳ ನೆರವಾಗುತ್ತದೆ. ರಾಜನಿಗೂ **ಕಂದಾಡೈ ರಾಮಾನುಜಯ್ಯಂಗಾರ್**ರವರಿಗೂ ಇದ್ದ ಪರಸ್ಪರ ಗೌರವ ಅರಿಯುವುದರಲ್ಲಿ, ಇಂತಹ ಅಗತ್ಯ ಧಾರ್ಮಿಕ ಕೆಲಸವನ್ನು ರಾಜ ಕಕ್ಕುಲತೆಯಿಂದ ಕೈಗೊಂಡುದುದನ್ನು ಅರಿಯುವುದಕ್ಕೆ ಈ ಶಾಸನ ನೆರವಾಗುವುದು.

(1) ಸಾಳುವ ನರಸಿಂಹ ಮಹಾರಾಜನು ಈ ರಾಮಾನುಜ ಕೂಟಗಳ ಪೋಷಕ. ಆತ ಇವುಗಳನ್ನು ಅತಿ ಸುವ್ಯವಸ್ಥಿತವಾಗಿ ನಡೆಸಲು ಸಾಕಷ್ಟು ವ್ಯವಸ್ಥೆ ನಡೆಸಿದ್ದನೆಂಬುವಕ್ಕೆ (ಇತರೆ ಭಕ್ತಾದಿಗಳು ನೀಡಿದ ದತ್ತಿಯನ್ನು ಹೊರತು ಮಾಡಿ) ಗುಂಡಿಪುಡಿ ಗ್ರಾಮವನ್ನು ದತ್ತಿಯಾಗಿ ಬಿಟ್ಟಿದ್ದನೆಂಬು

---

1. T.D.E. Report P. 47

ದನ್ನು ತಿರುಮಲ್ಬೈ ದೇವಸ್ಥಾನದ, 1406 ನೇ ವರ್ಷದ, 163 ನೇ ಶಾಸನ: ಒಂದು ಸ್ಪಷ್ಟ ಉದಾಹರಣೆ. (1) **ಅಳಗಿಯ ಮಣವಾಳ ಜೀಯರ್ II** ರವರ ಮುಖ್ಯಶಿಷ್ಯರಾದ **ಕಂದಾಡೈ ರಾಮಾನುಜ ಅಯ್ಯಂಗಾರ್**ರವರನ್ನೂ ನೇಮಿಸಿರುವ ವಿಷಯದ ಮೇಲೆ—ಗೋವಿಂದರಾಜ ಸ್ವಾಮಿ ದೇವಸ್ಥಾನದ ಶಾಸನಗಳಾದ 24–25 ನೇ ಶಾಸನಗಳು (ಕಾಲ ಶಾಲಿವಾಹನ ಶಕ 1388 ಅಂದರೆ ಕ್ರಿ.ಶ. 1466 ಮತ್ತು ಶಕ 1391 ಅಂದರೆ ಕ್ರಿ. ಶ. 1469)–ಇನ್ನೂ ಹೆಚ್ಚು ಬೆಳಕು ಚೆಲ್ಲುತ್ತವೆ. ದೇವಸ್ಥಾನದ ಸ್ಥಾನತ್ತಾರ್‌ರವರು ಕೆಲವು ಭೂಮಿಗಳನ್ನು **ಕಂದಾಡೈ ರಾಮಾನುಜ ಅಯ್ಯಂಗಾರ್**ರವರಿಗೆ ವಹಿಸಿರುವುದೂ ಉಲ್ಲೇಖವಾಗಿದೆ.

(2) "We note in No. 107 G.T. an (ಗೋವಿಂದರಾಜ ದೇವಸ್ಥಾನದ ಶಾಸನ ನಂ. 107) acknowledgement made by ಕಂದಾಡೈ ಮಾಧವಯ್ಯಂಗಾರ್, on the 6th day of ಚಿತ್ತಿರೈ in the cyclic year ಚಿತ್ರಭಾನು, correspoding perhaps to ಶಕ 1444 (ಕ್ರಿ. ಶ. 1522), when **ಕಂದಾಡೈ ರಾಮಾನುಜ ಅಯ್ಯಂಗಾರ್** was no longer alive, and the charge of the ರಾಮಾನುಜ ಕೂಟಂ devolved upon (ಜೇರೆಯವರಿಗೆ ವಹಿಸುವುದು), the witness ಮಾಧವಯ್ಯಂಗಾರ್ (ಕಂದಾಡೈ

1. ಅಳಗಿಯ ಮಣವಾಳ ಜೀಯರ್ IIರವರಿಗೆ, ಅಳಗಿಯ ಮಣವಾಳ ಮಹಾಮುನಿ, ರಮ್ಯಜಾಮಾತ, ಸುಂದರ ಜಾಮಾತ, ಯತೀಂದ್ರ ಪ್ರವಣ, ಪೆರಿಯ ಜೀಯರ್, ಅಳಗಿಯ ಮಣವಾಳ ಪೆರುಮಾಳ್ ನಾಯಿನಾರ್ ಇತ್ಯಾದಿ ಹೆಸರುಗಳಿವೆ. ಇವರ ಕಾಲ, ಬಹುಶಃ ಕ್ರಿ. ಶ. 1389—1440; ಅಥವ 1420—1468 ಇರಬೇಕು.

ಆದರೆ ವರದರಾಜ ಅಥವ ನಂಪಿಳ್ಳೈ ಅಥವ ತಿರುಕ್ಕಲಿ ಕನ್ರಿ ದಾಸರ್ ಅಥವ ಲೋಕಾಚಾರ್ಯ ಇತ್ಯಾದಿ ಬಿರುಮಳ್ಳ ಗುರುಗಳಿಗೆ ಶಿಷ್ಯರಾಗಿ, ಅಳಗಿಯ ಮಣವಾಳ ಪೆರುಮಾಳ್ ನಾಯಿನಾರ್ I ಎಂಬುವವರು ಬೇರೊಬ್ಬರಿದ್ದಾರೆ. ಇವರು ತೆಂಗಲೈ ಆಚಾರ್ಯರಾದ ಪಿಳ್ಳೈ ಲೋಕಾಚಾರ್ಯರ ಸಮಕಾಲೀನರು. ಪಿಳ್ಳೈ ಲೋಕಾಚಾರ್ಯರಕಾಲ ಕ್ರಿ. ಶ. 1264—1327.

ಇರಬೇಕು), probably a close relation of (ಕಂದಾಡೈ) ರಾಮಾನುಜಯ್ಯಂಗಾರ್ before the settlement officers of the state (ಕೂಡುಸೇವೆಯಾರ್) at Tirupati............" ಇತ್ಯಾದಿ.

ಮೇಲಿನ ಶಾಸನದಂತೆ **ಕಂದಾಡೈ ಮಾಧವಯ್ಯಂಗಾರ್**ರವರು **ಕಂದಾಡೈ ರಾಮಾನುಜಯ್ಯಂಗಾರ್**ರವರ ಹತ್ತಿರ ಸಂಬಂಧಿಗಳಾಗಿರಬೇಕೆಂದೂ, ಇವರೂ ಅಂದು ಒಬ್ಬ ಧಾರ್ಮಿಕ ಪ್ರಮುಖ ವ್ಯಕ್ತಿಗಳಾಗಿದ್ದಿರಬಹುದೆಂದು ಊಹಿಸಲು ಸಾಕಷ್ಟು ಸಾಕ್ಷ್ಯ ದೊರೆತಂತಾಗುವುದು. ಅಲ್ಲದೆ ಕಂದಾಡೈ ರಾಮಾನುಜಯ್ಯಂಗಾರ್‌ರವರು ಶಾಲಿವಾಹನ ಶಕ 1444 ರ ಹೊತ್ತಿಗೆ, ಅಂದರೆ ಕ್ರಿ. ಶ. 1552 ರ ಹೊತ್ತಿಗೆ ಆಗಲೇ ತೀರಿಕೊಂಡಿರಬೇಕು. ಇಲ್ಲವೇ ತಿರುಪತಿಯನ್ನು ಬಿಟ್ಟು ಬೇರೆಲ್ಲಿಗಾದರೂ ಹೋಗಿರಬಹುದು ಎಂದು ಊಹಿಸಬಹುದು.

ಆದರೆ:— (1) "We now get an account of benefactions of **Kandai Ramanuja Dasa** to the Sri Rangam Temple. This ascetic who first came to Sri Rangam in 1491 A.D. was none else than Rama Raja, the elder brother of Vira Narasinga Raya otherwise known as Narasinga Saluva........" ಎಂದು ಇನ್ನೊಂದು ಉಲ್ಲೇಖ ಬೇರೊಂದು ಕಡೆ ಕಂಡುಬರುವುದು.

ಅದರಂತೆ (2) "He proceeded to Tirupati and offering a coin of Rama (ಅಯೋಧ್ಯೆಯ ಶ್ರೀರಾಮಚಂದ್ರನ ನಾಣ್ಯ), brought all the temples in Tirumalai under

1. The Koyil Olugu (History of the Sri Rangam temple) by T. S. Partha Sarathy, Published by T.T.D. Tirupati—July 1954. P. 73.

2. Same book P. 74.

his control. As mentioned before, he came to Sri Rangam in 1491 A.D. and became a devout disciple of Kandadai Annan, Donning the robes of an ಏಕಾಂಗಿ, he obtained the ದಾಸ್ಯನಾಮ of **ಕಂದಾಡೈ ರಾಮಾನುಜ ದಾಸ**'' ಇತ್ಯಾದಿ ಇದೆ.

ಅಂದರೆ **ಕಂದಾಡೈ ರಾಮಾನುಜಯ್ಯಂಗಾರ್**ರವರಿಗೆ **ಕಂದಾಡೈ ರಾಮಾನುಜ ದಾಸ** ಎಂಬ ಬೇರೊಂದು ಹೆಸರು ಇತ್ತು. ಇವರು ತಮ್ಮ ತೀರ್ಥಯಾತ್ರೆಯ ಕಾರ್ಯಕ್ರಮದಲ್ಲಿ (1) ಅಯೋಧ್ಯೆಗೆ ಹೋಗಿ ಅಲ್ಲಿ ಶ್ರೀ ರಾಮಚಂದ್ರನ ನಾಣ್ಯಗಳನ್ನು ಶೇಖರಿಸಿದ್ದರು. ನಂತರ ಕ್ರಿ. ಶ. 1491 ರ ವೇಳೆಗೆ ಪ್ರಥಮಸಾರಿ ಶ್ರೀರಂಗಕ್ಕೆ ಬಂದಿದ್ದರು ಎಂದು ಊಹಿಸಬಹುದು.

ಆದರೆ ತಿರುಪತಿಯನ್ನು ಎಂದು ಬಿಟ್ಟರು, ಎಷ್ಟು ಸಾರಿ ಬಿಟ್ಟರು, ಮತ್ತೆ ಯಾವಾಗ ತಿರುಪತಿಗೆ ಮತ್ತು ಶ್ರೀರಂಗಕ್ಕೆ ಹೋದರು, ಎಂಬುದರ ಬಗೆಗೆ ಇನ್ನು ಹೆಚ್ಚಿನ ಸಂಶೋಧನೆ ಅಗತ್ಯವಾಗಿದೆ.

**ಕಂದಾಡೈ ರಾಮಾನುಜಯ್ಯಂಗಾರ್**ರವರಿಗೆ, **ರಾಮರಾಜ** ಎಂಬ ಹೆಸರು ಇತ್ತು ಎನ್ನುವುದು, ಮತ್ತು ಇವರು **ವೀರ ನರಸಿಂಹ ಸಾಳುವನ** ಅಣ್ಣಂದಿರೆಂದು (The Koyil Olugu ಎಂಬ ತಮ್ಮ ಕಿರುಹೊತ್ತಿಗೆಯಲ್ಲಿ) ಹೇಳುವ ಶ್ರೀ ಟಿ. ಎಸ್. ಪಾರ್ಥಸಾರಥಿಯವರ ಮಾತು, ಅಷ್ಟು ನಂಬಿಕೆಗೆ ಅರ್ಹವಾದ ಮಾತಿನಂತೆ ಕಾಣುವುದಿಲ್ಲ.

ಒಟ್ಟಿನಲ್ಲಿ **ಕಂದಾಡೈ ರಾಮಾನುಜಯ್ಯಂಗಾರ್**ರವರು ತಾವು ದಿವ್ಯ ದೇಶಗಳ ಪರ್ಯಟನೆಗೆ ಆಗಾಗ ಹೋಗುತ್ತಿದ್ದರೆಂದು, ಅಂತಹ ಸಮಯದಲ್ಲಿ

---

1. The Koyil Olugu (History of Sri Rangam Temple. **July 1954. P. 73—74.**

**ಕಂದಾಡೈ ರಾಮಾನುಜಯ್ಯಂಗಾರ್**ರವರ **ಕಾಲ** ಕ್ರಿ. ಶ. 1430—1496ವರೆಗೆ **ಎಂದು ತಃಪ್ರ ನಂ. 49 ತಿಳಿಸುತ್ತದೆ. T.D.E. Glossary, Page 37.**

ಬೇರೊಬ್ಬರು ತಿರುಪತಿಯು ಅವರ ಸ್ಥಾನದಲ್ಲಿ ಕೆಲಸ ನಿರ್ವಹಿಸುವಂತಹ ಪ್ರಸಂಗ ಬರುತ್ತಿದ್ದಿತೆಂದು, ಆಗ ರಾಮಾನುಜ ಕೂಟದ ಬಗೆಗೆ ರೂಪಿಸ ಬೇಕಾಗುವ ದತ್ತಿ ಶಾಸನಗಳಲ್ಲಿ; ಅನಿವಾರ್ಯವಾಗಿ ಬೇರೊಬ್ಬರ ಹೆಸರನ್ನು ಗೊತ್ತುಮಾಡುವ ಪ್ರಸಂಗ ಬರುತ್ತಿದ್ದಿತೆಂದು ಊಹಿಸಬಹುದು. ಇವರ ಶಿಷ್ಯ ರಾದ **ಕಂದಾಡೈ ಮಾಧವಯ್ಯಂಗಾರ್**ರವರು ತಮ್ಮ ಗುರುಗಳ ಜವಾಬು ದಾರಿಯನ್ನು ತಾವೇ ಹೊತ್ತು ಮುಂದುವರೆಸುತ್ತಿದ್ದರು ಎನ್ನುವುದಕ್ಕೆ ತಿರುಪತಿಯ ಶಾಸನಗಳಲ್ಲಿ ಆಧಾರವೂ ಇದೆ.

(1) ಸಾಳುವ ನರಸಿಂಹದೇವರಾಯನ ಕಾಲವಲ್ಲಿ ನಡೆಯುತ್ತಿದ್ದ ಸತ್ರವ ಬಗೆಗೆ—ತಿರುಮಲೈ ದೇವಸ್ಥಾನದ T. T. 197 ನೇ ಶಾಸನವು—ಇನ್ನಷ್ಟು ಬೆಳಕು ಚೆಲ್ಲುತ್ತದೆ. ಬ್ರಹ್ಮರಥೋತ್ಸವ ಕಾಲದಲ್ಲಿ ಸೇರುವ ಹೆಚ್ಚಿನ ಭಕ್ತರ ಸೇವೆಗಾಗಿ (ಬ್ರಾಹ್ಮಣರಿಗೂ ಆ 10 ದಿನಗಳು) ವಿಶೇಷ ಸಂಖ್ಯೆಯಲ್ಲಿ ಊಟದ ಏರ್ಪಾಡಿತ್ತೆಂದು ಕಂಡು ಬರುವುದು.

ಇಲ್ಲಿ ಇನ್ನೊಂದು ಮುಖ್ಯ ಸಂಗತಿಯನ್ನು ಮರೆಯುವಂತಿಲ್ಲ. (2) "No further reference to the **ಸತ್ರಂ** placed under ಹಸ್ತಗಿರಿ-ಅಯ್ಯನ್ exist, but the interest evinced for the ರಾಮಾನುಜ ಕೂಟಂ, by a number of devotees and the popularity gained for it through **ಕಂದಾಡೈ ರಾಮಾನುಜಯ್ಯಂಗಾರ್** are evidenced by the arrangements made by these devotees individually for the delivery of the donor's share in each case, of the offered food for the ರಾಮಾನುಜ ಕೂಟಂ. **ಕಂದಾಡೈ ರಾಮಾನುಜ ಅಯ್ಯಂಗಾರ್ parted with his right to the donor's share in all cases of his provision for food offerings to the deities in favour of the** ರಾಮಾನುಜ

1 T. D. E. Report P. 48.
2 ” **P. 49.**

ಕೂಟ(೨) (Nos. 5, 6, and 70 T. T. and 19, 30, and 50 G.T.). The combined influence of the political chief and the religious preceptor is seen to have been felt both in political and religious spheres."

ದತ್ತಿಯ ಶಾಸನಗಳಲ್ಲಿ ಉಲ್ಲೇಖವಾಗುವ ನಿರ್ವಹಣಾಧಿಕಾರಿಗಳ ಭಾಗ (ರಾಮಾನುಜ ಕೂಟದ ನಿರ್ವಹಣೆ ಬಗೆಗೆ) ವನ್ನೂ **ಕಂದಾಡೈ ರಾಮಾನುಜ ಅಯ್ಯಂಗಾರ್**ರವರು ಸ್ವೀಕರಿಸದೆ, ಅದನ್ನೂ ಭಕ್ತವೃಂದವವರಿಗೇ ವಿನಿಯೋಗಿಸುತ್ತಿದ್ದರೆಂಬುದು,(ಅಥವ ಭಕ್ತವೃಂದದವರ ಬಳಕೆಗಾಗಿ ನೀಡಿದ್ದುದು) ಒಂದು ಚಿರಸ್ಮರಣೀಯವಾದ ಮತ್ತು ಪ್ರಶಂಸಾರ್ಹವಾದ ವಿಷಯವಾಗಿದೆ.

(1) ಅಲ್ಲದೆ ರಾಮಾನುಜ ಕೂಟದ ಬಗೆಗೆ ಇನ್ನೂ ಹೆಚ್ಚಿನ ಸಂಗತಿಯನ್ನು ತಿಳಿಸುವ ಅನೇಕ ಶಾಸನಗಳಿವೆ. ಮುಖ್ಯವಾಗಿ ಅವುಗಳಲ್ಲಿ ತಿರುಮಲೆ ದೇವಸ್ಥಾನದ ಶಾಸನಗಳಾದ 28, 50, 63, 155, 200 ನೇ ನಂಬರಿನ ಶಾಸನಗಳೂ, ಗೋವಿಂದರಾಜಸ್ವಾಮಿ ದೇವಸ್ಥಾನದ 55 ನೇ ಶಾಸನವೂ ಮುಖ್ಯವಾದವು.

(2) ವಿಜಯನಗರದ ಅರಸನಾದ ಕೃಷ್ಣರಾಯನು ತನ್ನ ಪರಮ ಶತ್ರು ಪ್ರತಾಪರುದ್ರ ಗಜಪತಿಯನ್ನು ಸೋಲಿಸಿ, ಕೊಂಡವೀಡು ವರೆವಿಗೆ ಓಡಿಸಿ ಉದಯಗಿರಿಯನ್ನು ಗೆದ್ದ ಸುಸಂಭ್ರಮದ ಸಂಕೇತವಾಗಿ (ಬ್ರಾಹ್ಮಣರಿಗಾಗಿ) ಸತ್ರದ ಅಭಿವೃದ್ಧಿಗಾಗಿ ನೀಡಿವ ದತ್ತಿಯ ಶಾಸನವು ತಿರುಪತಿ ದೇವಸ್ಥಾನದ 201, 202, 203. 246 ನೇ ಶಾಸನಗಳಲ್ಲಿ ಕಾಣಬರುವುದು. ಈ 246ನೇ ಶಾಸನವು ಶಕ 1445 (ಕ್ರಿ. ಶ. 1523) ಕ್ಕೆ ಸಂಬಂಧಿಸಿದ್ದಾಗಿದೆ.

ಹೀಗೆ ಅಂದಿನ ಕಾಲದಲ್ಲಿ **ರಾಮಾನುಜ ಕೂಟಗಳು, ಅನ್ನ ಸತ್ರಗಳು**; ಯಾತ್ರಾರ್ಥಿ ಭಕ್ತರ ಪವಿತ್ರ ಸೇವೆಯಲ್ಲಿ, ಬಹು ದೊಡ್ಡ ಪಾತ್ರ ವಹಿಸುತ್ತಿದ್ದವೆಂದೂ, ಅಂತಹವುಗಳ ಮೇಲ್ವಿಚಾರಣೆಯನ್ನು **ಕಂದಾಡೈ ರಾಮಾನುಜಯ್ಯಂಗಾರ್, ಕಂದಾಡೈ ಮಾಧವಯ್ಯಂಗಾರ್** ರಂತಹ ಸಮರ್ಥ ಮೇಲ್ವಿಚಾರಕರು ನಡೆಸುತ್ತಿದ್ದರೆಂಬುದು ಗಮನಾರ್ಹವಾಗಿದೆ.

---

1 T. D. E. Report P. 49.
2 " P. 49.

# ನಮ್ಮಾಳ್ವಾರರ ಸೇವೆಯಲ್ಲಿ

**ಶಾತ್ತಾದ ಶ್ರೀವೈಷ್ಣವರಲ್ಲಿ** ಕೆಲವರು **ನಮ್ಮಾಳ್ವಾರರ** (ಅರ್ಚಾವತಾರಿ ವಿಗ್ರಹದ) ಸೇವೆಯಲ್ಲೂ ತಮ್ಮ ಕೈಂಕರ್ಯವನ್ನು ಸಲ್ಲಿಸುತ್ತಿದ್ದರು ಎನ್ನುವುದಕ್ಕೆ ಕೆಲವು ಉದಾಹರಣೆಗಳು ಶಾಸನಗಳಲ್ಲಿ ಕಾಣುತ್ತವೆ :– (1) "Further provision during the same occasion was made by one **ಪಟ್ಟರ್ ಪಿರಾನ್ ಅಯ್ಯನ್**. one of the (2) **ಶಾತ್ತಾದ ಏಕಾಕಿ ಶ್ರೀವೈಷ್ಣ(ವಾಸ್)ವರ್‌ಗಳ್** in Saka 1436 (ಕ್ರಿ. ಶ. 1514) for offerings on the 11th day, being the day of the **ಕನ್ನಿನುಂ—ಶಿರುತ್ತಾಂಬು—ಶಿರಪ್ಪು**, by a deposit of 150 ಪಣಂ" ಎಂದು ಗೋವಿಂದರಾಜಸ್ವಾಮಿ ದೇವಸ್ಥಾನದ 203 ನೇ ಶಾಸನ ಹೇಳುತ್ತದೆ.

---

1. T. D. E. Report P. 77.

2. ಏಕಾಕಿ ಎಂದರೆ ಮದುವೆಯಾಗದ, (ಬ್ರಹ್ಮಚಾರಿ) ಭಕ್ತರು ಎಂದರ್ಥ. ಶಾತ್ತಾದರಂತೆ ಶಾತ್ತಿನಿ ಶ್ರೀವೈಷ್ಣವರಲ್ಲಿ ಏಕಾಕಿ ಭಕ್ತರಿದ್ದರು—ಸಂಪಾದಕ.

ಆಳ್ವಾರುಗಳ ಅರ್ಚಾವತಾರಿ ವಿಗ್ರಹಗಳ ಸ್ಥಾಪನೆ ಕಾಲದ ಬಗೆಗೆ:— In Tirupati among the ಆಳ್ವಾರ್(ಸ್)ಗಳ್, we find that ತಿರುಮಂಗೈ ಆಳ್ವಾರ್, ಕುಲಶೇಖರ ಆಳ್ವಾರ್, ಪೆರಿಯಾಳ್ವಾರ್ and ನಮ್ಮಾಳ್ವಾರ್ were enshrined, the first in Sri Govindaraja Temple a short time prior to the 19th year of the reign of Raja Raja III (1235 A. C.) (Nos. 126—G.T. & 94 T.T.); ನಮ್ಮಾಳ್ವಾರ್ beside Sri ಕಪಿಲೇಶ್ವರ Temple at the foot of the hill, some time in the 13th century, if not later (No. 202—G.T.); and ನಮ್ಮಾಳ್ವಾರ್, ಪೆರಿ ಆಳ್ವಾರ್ ಮತ್ತು ಕುಲಶೇಖರಾಳ್ವಾರ್ in Tirupati some time before ಶಕ 1407 (ಕ್ರಿ. ಶ. 1485), the date of the inscription referring to the ಅಧ್ಯಯನೋತ್ಸವಂ of these four ಆಳ್ವಾರ್(ಸ್)ಗಳ್ (No. 70—G.T.) T.D.E. Report. P. 75 - ಸಂಪಾದಕ.

# ರಾಮಾನುಜರ ಸೇವೆಯಲ್ಲಿ

**ಭಗವಾನ್ ರಾಮಾನುಜಾಚಾರ್ಯರ** ತಿರುನಕ್ಷತ್ರ ಉತ್ಸವವನ್ನು ತಿರುಪತಿಯ ಬೆಟ್ಟದಲ್ಲಿರುವ ರಾಮಾನುಜರ ಮಂದಿರದಲ್ಲಿ ಪ್ರತಿವರ್ಷವೂ ವೈಭವದಿಂದ ಆಚರಿಸಲಾಗುತ್ತಿತ್ತು. ಅಂದಿನ ಭಕ್ತರಿಗೆ ಈ ಉತ್ಸವವು ಇಹದ ದಡದಿಂದ ಪರದ ದಡಕ್ಕೆ ಹಾಯುವ ಹರಿಗೋಲಾಗಿತ್ತು. ನಾಲಾಯಿರ ದಿವ್ಯ ಪ್ರಬಂಧದ (ನಾಲ್ಕು ಸಾವಿರ ಪ್ರಬಂಧ ಸಮುಚ್ಚಯ, ಅಥವ ದ್ರವಿಡ ವೇದ ಸಂಹಿತೆ, the Gospel of the Tamils) ಒಂದೊಂದು ಭಾಗವನ್ನು ಒಂದೊಂದು ದಿನ ಸೇವಾಸ್ತುತಿಯಾಗಿ ಆರಿಸಿಕೊಳ್ಳಲಾಗಿದ್ದಿತು.

(1) "One noteworthy fact comes to light in this connection, and it is that **both the ಶಾತ್ತಿನ ಶ್ರೀವೈಷ್ಣ(ವಾಸ್)ವರ್‌ಗಳ್ and the ಶಾತ್ತಾದ ಶ್ರೀವೈಷ್ಣ(ವಾಸ್)ವರ್‌ಗಳ್ chanted the ಪ್ರಬಂಧಂ** composed by the ಆಳ್ವಾ(ರ್ಸ್)ಗಳ್, and as a recompense received two ಪ್ರಸಾದಂ and six ಅಪ್ಪಂ(ಸ್)."

"It may be noted, that Vaishnavism was so largely prevelent in the Vijayanagara days, and especially from the time of Saluva Narasimha onwards, that its spiritual teachers spared no pains, in the propagation of its tenets and ritual among all communities and classes of people throughout the country. **Among them at Tirupati, the ಶಾತ್ತಾದ ಶ್ರೀವೈಷ್ಣ(ವಾಸ್)ವರ್‌ಗಳ್ seem to have been the most favoured class, having become the**

1. T.D.E. Report P. P. 85—86.

**devoted disciples of ಕಂದಾಡೈ ರಾಮಾನುಜಯ್ಯಂಗಾರ್, who is seen to have wielded extensive influence over the rulers of the land, and the authorities of the temple, as well as over the common folk.** These ಶಾತ್ತಾದ ಶ್ರೀವೈಷ್ಣ(ವಾಸ್)ವರ್‌ಗಳ್ served the temple in various capacities, and in particular in cultivating flower-gardens, and supplying flowers to temples. They also undertook to supply, **on behalf of their** ಗುರು, ಕಂದಾಡೈ ರಾಮಾನುಜಯ್ಯಂಗಾರ್, incense, spices and perfumery for the daily ತಿರುಮಂಜನಂ of Sri ವೆಂಕಟೇಶ್ವರ and Sri ಗೋವಿಂದರಾಜ and in consideration of these and similar services rendered to the temple, they were granted a share of the ಪ್ರಸಾದಂ (ಸ್) offered to the deities daily and on special occasions, in addition to a fixed salary (Nos. 197 and 200 T. T.). **They seem to have established themselves as a colony of sixteen houses, at Tirumala in the ಕಂದಾಡೈ ರಾಮಾನುಜಯ್ಯಂಗಾರ್ street and the status they were accorded, under the patronage of ಕಂದಾಡೈ ರಾಮಾನುಜಯ್ಯಂಗಾರ್, is evidenced by the phraseology employed in referring to their residence as the sixteen ತಿರುಮಾಳಿಗೈ and the ಶಾತ್ತಾದ-ಶ್ರೀವೈಷ್ಣವರ್‌ಗಳ್-ತಿರುಮಾಳಿಗೈ.** It is, however possible that in later times they lost ground and gave up their service to the temple; and at the present time, not one among them has anything to do with the ceremonial and service conduct-

ed in the temple at Tirumala.

ಅಲ್ಲದೆ........"to be offered at the **ರಾಮಾನುಜನ್–ಮಂಟಪಂ** in the ಕಂದಾಡೈ ರಾಮಾನುಜಯ್ಯಂಗಾರ್ Street........" [T. T. ಶಾಸನ ನಂ. 627, T. D. E. Inscriptions Vol. II Page 315] ಎನ್ನುವ ಶಾಸನ; ಮತ್ತು

"The donor's share of the one ಅಪ್ಪ–ಪಡಿ offered at the ಮಂಟಪಂ in the **ರಾಮಾನುಜನ್** street shall be delivered to the ರಾಮಾನುಜ ಕೂಟಂ...." [T. T. ಶಾಸನ 626, T. D. E. Inscriptions Vol. II page 323] ಇತ್ಯಾದಿ ಶಾಸನಗಳಿಂದ ಕಂದಾಡೈ ರಾಮಾನುಜಯ್ಯಂಗಾರ್‌ರವರು ವಾಸಿಸುತ್ತಿದ್ದ ಬೀದಿಯೂ ಪ್ರಸಿದ್ಧವಾಗಿತ್ತೆಂದೂ, ಆ ಬೀದಿಯಲ್ಲಿ **ರಾಮಾನುಜನ್–ಮಂಟಪಂ** (ಭಗವಾನ್ ರಾಮಾನುಜಾಚಾರ್ಯರ ಮಂಟಪ ಅಲ್ಲ) ಇತ್ತೆಂಬುದೂ ಸ್ಮರಣೀಯವಾದ ವಿಚಾರವಾಗಿವೆ.

ಇಂತಹ ಉಲ್ಲೇಖಗಳನ್ನು ಓದಿದಾಗ ಎದೆಯುಬ್ಬಿ, ನಮ್ಮ ಮಸ್ತಕ ಮುಗಿಲೆತ್ತರಕ್ಕೆ ನಿಮಿರಿ ನಿಲ್ಲುತ್ತದೆ. ಆದರೆ ಇಂದಿನ ಪರಿಸ್ಥಿತಿಯು ಚಿಂತಾಜನಕವಾಗಿದೆ. ಈ ಹಿಂದೆ ಇದ್ದ ಗೌರವದ, ಪ್ರೇಮದ, ಸ್ಥಾನ ಇಂದು ಇಲ್ಲದೆ ಇರುವುದಕ್ಕೆ, ಸ್ವಯಂಕೃತಾಪರಾಧವೆಷ್ಟು, ಸ್ವಯೂಥರು, ಇತರೆಯುವರು ಒತ್ತರಿಸಿದ್ದೆಷ್ಟು, ಅಂತಹ ಸನ್ನಿವೇಶ ಉದ್ಭವಿಸಲು ಉಂಟಾದ ಉತ್ಪಾತವೇನು ಎಂಬುದರ ಬಗೆಗೆ, ಪ್ರತ್ಯೇಕ ಸಂಶೋಧನೆ ಆಗತ್ಯ.

# ರಾಮಾನುಜರಿಗೆ ತಿರುಪತಿಯ ಪ್ರೇಮ

ಆಚಾರ್ಯ ರಾಮಾನುಜರಿಗೆ ತಿರುಪತಿ, ತಿರುಮಲೈ ಎಂದರೆ ಬಹಳ ಪ್ರೇಮ. ಶ್ರೀರಂಗದಲ್ಲೇ ಅವರು ತಮ್ಮ 120 ವರುಷಗಳ ಬಹು ಭಾಗವನ್ನು ಕಳೆದರೂ, ತಿರುಮಲೈ ಬಗೆಗೆ ತಮ್ಮ ಗೌರವ ಭಕ್ತಿ ರವೆಯಷ್ಟೂ ಕಡಮೆಯಿರಲಿಲ್ಲ. ಅವರ ದೃಷ್ಟಿಯಲ್ಲಿ ತಿರುಮಲೆಯ ಶ್ರೀನಿವಾಸನ ಸನ್ನಿಧಿ ಸಾಕ್ಷಾತ್ ಭೂವೈಕುಂಠವೇ! ಒಮ್ಮೆ ಆಚಾರ್ಯರು. (1) "This Sri Saila (Tirumala) is as it were Vaikuntha on the earth. He who lives here throughout his whole life, does verily live in Vaikuntha itself. and in the end goes to Vaikuntha and finds refuge in the shade of the feet of Sriman Narayana" ಎಂದು ಹೃದಯ ತುಂಬಿ ಮಾತನಾಡಿದ್ದಾರೆ.

"ತಿರುಮಲೈನಲ್ಲಿ ನೆಲಸಿ, ಹೂತೋಟಮಾಡಿಕೊಂಡು ಆಜೀವಪರ್ಯಂತ ಶ್ರೀನಿವಾಸನ ಸೇವೆಮಾಡುವ ಭಕ್ತರಿದ್ದಾರೆಯೇ" ಎಂದು ಒಮ್ಮೆ ರಾಮಾನುಜಾಚಾರ್ಯರು ತಮ್ಮ ಪ್ರವಚನ ಕಾಲದಲ್ಲಿ ತಮ್ಮ ಶಿಷ್ಯರನ್ನು ಕೇಳಿದರು. ಆಗ ಅನಂತಾಚಾರ್ಯನೆಂಬ ಶಿಷ್ಯ ಆ ರೀತಿ ತಿರುಮಲೈಗೆ ಹೋಗಿ ನೆಲೆಸಲು ಕೂಡಲೆ ಒಪ್ಪಿಕೊಂಡನು.

ಆತನನ್ನು ಕುರಿತು ರಾಮಾನುಜರು ಸಜಲನಯನದಿಂದ ಭಾವಭರಿತರಾಗಿ:— (2) "You are indeed blessed, my child. You have become the cause of liberation for fourteen

1. Life of Sri Ramanuja by Swamy Ramakrishnananda of Ramakrishna Math, Mylapore, Madras 1959. P. 169.

2. Same book. P. 169.

generations of your ancestors and progeny. And I too am blessed to have a disciple like you." ಎಂದು ನುಡಿದರು. ಇಲ್ಲಿ ಅನಂತಾಚಾರ್ಯರಂತಹ ಶಿಷ್ಯನನ್ನು ಪಡೆದ ರಾಮಾನುಜರು ಅದು ತಮ್ಮ ಭಾಗ್ಯ–ಎಂದು ಭಾವಿಸಿದುದನ್ನು, ತಾವು ಆದರಿಂದ ಪುನೀತರಾದ ರೆಂದು ಭಾವಿಸಿದುದನ್ನು ನಾವು ಮತ್ತೆ ಮೆಲುಕು ಹಾಕಿದಾಗ, ನಾವು ಮೂಕ ರಾಗುತ್ತೇವೆ. ಹೆಚ್ಚಿನ ಮಾತು ಇಲ್ಲಿ ಮೈಲಿಗೆಯಾಗುತ್ತದೆ.

ಈ ರೀತಿ ರಾಮಾನುಜರಿಂದ ಭೂವೈಕುಂಠವೆಂದು ಮೆಚ್ಚಿಗೆ ಪಡೆದ ತಿರುಮಲೈನಲ್ಲಿ ಶ್ರೀ ವೈಷ್ಣವರು, ಶಾತ್ತಾದ ಶ್ರಿ ವೈಷ್ಣವರು, ಇತರೆ ಭಕ್ತ ಕೋಟಿಯು ಅಲ್ಲಿ ಸೇವೆಗೆ ನಿಂತಿದ್ದು, ಅವರ ಹಿಂದಿನ ಸಹಸ್ರ ಜನ್ಮದ ಪುಣ್ಯದ ಪ್ರತೀಕವೇ ಇರಬೇಕು!

ಈ ಹಿನ್ನೆಲೆಯಲ್ಲಿ (1) ಕುಲಶೇಖರ ಆಳ್ವಾರರು ಈ ಹಿಂದೆ ಹೇಳಿದ ಮಾತುಗಳನ್ನು (ಪುಟ 4) ಮತ್ತೆ ಸ್ಮರಿಸುವುದು ಮೇಲು.

ಇವೊತ್ತಿನ ಸಾಮಾಜಿಕ ಹಿನ್ನೆಲೆಯಲ್ಲಿ, ತಿರುಪತಿಯ ಅಂದಿನ ವೈಭವದ ಚಿತ್ರ, ಭಕ್ತಿಯ ಪ್ರಭಾವಲಯ ನಮಗೆ ಮೂಡದು. ನಾವೂ ಮಾನಸಿಕವಾಗಿ ಆಯಾ ಶತಮಾನಗಳಷ್ಟು ಹಿಂದಕ್ಕೆ ಹೋಗಿ, ಅಂದಿನ ಭಕ್ತಿಯ ಆವರಣದಲ್ಲಿ ನಿಂತು ನೋಡಿದಾಗ; ಅಂದಿನ ತಲೆಮಾರಿನ ಆಸೆ ಆಕಾಂಕ್ಷೆಗಳು, ಗೊತ್ತು ಗುರಿಗಳು, ನಮಗೆ ಅರಿವಾಗಲು ಸಾಧ್ಯವಾಗುವುದು.

# ಅಧ್ಯಾಯ ೨

# ಕಂದಾಡೈ ವಂಶವೃಕ್ಷ

ತಿರುಪತಿಯ ಶ್ರೀನಿವಾಸನ ಸೇವೆಯಲ್ಲಿ ಸ್ವ ಯ ಂ ಪ್ರೇರಣೆಯಿಂದ ತಮ್ಮನ್ನೇ ತಾವು ಅರ್ಪಿಸಿಕೊಂಡ ಹಲವಾರು ವಂಶಗಳಲ್ಲಿ, **ಕಂದಾಡೈ**ವಂಶವೂ ಒಂದು. ಈ ವಂಶದ ಬಗೆಗೆ ಗೊತ್ತಿರುವ ತುಸು ವಿಷಯಡ ಬಗೆಗೆ ಅಧ್ಯಯನ ಅಗತ್ಯ.

**ಅಳಗಿಯ ಮಣವಾಳ ಪೆರುಮಾಳ್ ನಾಯನಾರ್ II** (ಮಣವಾಳ ಮಹಾಮುನಿ, ರಮ್ಯಜಾಮಾತಾ ಇತ್ಯಾದಿ ಬಿರುದುಳ್ಳವರು) ರವರಿಗೆ; ಕಂದಾಡೈ ರಾಮಾನುಜಯ್ಯಂಗಾರ್, ಯತಿರಾಜಯ್ಯನ್, ರಾಮಾನುಜ ಜೀಯರ್, ಪರದೇಶಿ ವೆಂಕಟಯ್ಯನ್, ರಾಮಾನುಜ ತಮ್ಮಯ್ಯಾರ್ ಎನ್ನುವ ಪ್ರಮುಖ ಶಿಷ್ಯರು ಇದ್ದರು. ಕೊನೆಯ ರಾಮಾನುಜ ತಮ್ಮಯ್ಯಾರ್‌ರವರು ಕಂದಾಡೈ ರಾಮಾನುಜಯ್ಯಂಗಾರ್‌ರವರ ಸೋದರರು. [ಆದರೆ ಈ ಹೆಸರಿನ ಮುಂದೆ 'ಕಂದಾಡೈ' ಏಕೆ ಸೇರಿಲ್ಲ ಎನ್ನುವ ಬಗೆಗೆ, ಮತ್ತು ರಾಮಾನುಜ ತಿಮ್ಮ ಅಯ್ಯಂಗಾರ್ ಎನ್ನುವ ಹೆಸರೂ ಒಂದೆಯೇ ಎನ್ನುವುದರ ಬಗೆಗೆ, ಸಂಶೋಧನೆ ಅಗತ್ಯ. ತಿರುಪತಿಯ ಶ್ರೀನಿವಾಸನಿಗೆ ತಿಮ್ಮಪ್ಪ ಎಂದು ಕರೆಯುವ ವಾಡಿಕೆ ಬಹು ಹಿಂದಿನಿಂದ ಬಂದಿರಬೇಕು. ಈ ತಿಮ್ಮಯ್ಯಂಗಾರ್, ತಮ್ಮಯ್ಯಾರ್ ಹೆಸರುಗಳು ತಿಮ್ಮಪ್ಪನ ಬೇರೆ ರೂಪಾಂತರಗಳು. ಸಂಪಾದಕ] ಕಂದಾಡೈ ರಾಮಾನುಜಯ್ಯಂಗಾರ್‌ರವರಿಗೆ ಕುಮಾರ ರಾಮಾನುಜಯ್ಯಂಗಾರ್ ಎಂಬ ಪುತ್ರರಿದ್ದರಾದ್ದರಿಂದ, ಇವರು ಗೃಹಸ್ಥರು ಎಂದು ತಿಳಿಯಬಹುದು.

## ಕಂದಾಡೈ ಅಪ್ಪಚ್ಚಿಯಾರ್ ಅಣ್ಣ

ಇವರು ತಿರುಪತಿಯವರು :– "1 For the purpose of presenting 13 ಅಪ್ಪಪಡಿ to Lord Srinivasa on the 13

1. Tirupati Devastanam Epigraphical Glossary 1938. P. 243.

days of the star ಪುನರ್ವಸು, occuring every month, as his ಉಭಯಂ (ಸೇವೆ) a contribution of 300 ಪಣಂ was paid by him as capital on 3rd October 1483 A.D. (Vide No. 80 Vol. II). Again a cash deposit of 1500 ಪಣಂ was made by him for the purpose of propitiating Sri Venkatesha with two ಅತಿರಸ-ಪಡಿ immediately after his hearing the ಉಲಾ (sung) in the name of the famous Kandadai Ramanuja Ayyangar at the time of Friday-ablution (ಪುಲುಗುಕ್ಕಾಪ್ಪು-ಮುರ್ಕೈ) once in 15 days celebrated for Sri Venkatesha in the temple at Tirumalai as his ಉಭಯಂ. ,(Vide No. 136 of Vol. II dated 21st December 1496 A.D.)

ಇದರಲ್ಲಿ ಉಲ್ಲೇಖಿಸಿರುವ (1) ಕಂದಾಡೈ ಅಪ್ಪಚ್ಚಿಯಾರ್ ಅಣ್ಣಂದಿರು ಕಂದಾಡೈ ರಾಮಾನುಜಯ್ಯಂಗಾರ್‌ರವರ ವಂಶದವರೇ ಆಗಿದ್ದರೆ ಎಂಬ ಬಗೆಗೆ ಸಂಶೋಧನೆ ಅಗತ್ಯ, ಆದರೂ ಮೇಲೆ ಕಂಡ ಶಾಸನಗಳಂತೆ ಭಗವಂತನ ಸೇವಾಕಾಲದಲ್ಲಿ ಕಂದಾಡೈ ರಾಮಾನುಜಯ್ಯಂಗಾರ್‌ರವರ ಸೇವೆಯನ್ನೂ ಅಂದು ಭಗವಂತಸಿಗೆ ವರದಿ ರೂಪದಲ್ಲಿ (ಉಲಾ) ಒಪ್ಪಿಸಲಾಗುತ್ತಿತ್ತೆಂದು ಭಾವಿಸಬಹುದು.

## ಕಂದಾಡೈ ಮಾಧವಯ್ಯಂಗಾರ್

(2) "He was the disciple and successor of the

1. Vide Page No. 217 of T.D.E. Report "Both Kandadai Madhavayyangar and Kandadai Appachiyar Anna must have been his (Kandadai Ramanujayyangar) Kinsmen ......etc ಎಂಬ ಉಲ್ಲೇಖ ನೋಡಿ.

2. T.D.E. Glossary P.P. 244—245.

famous Kandadai Ramanuja Ayyangar who was the disciple of ಅಳಗಿಯ ಮಣವಾಳ ಜೀಯರ್ of Kanchi (Vide Table No. 49). For the celebration of ತ್ರೈ-ಬ್ರಹ್ಮೋತ್ಸವಂ, instituted by Krishnaraya Maharaya for Sri Venkatesha at Tirumalai, ಅಧ್ಯಯನೋತ್ಸವಂ, ತನ್ನೀರ ಮುಡು festival etc., he granted ತಿರುಮಲದೇವಿ ಪುರಂ village and 1600 ಕುಲಿ of ಸರ್ವಮಾನ್ಯ (Tax free lands) in favour of Sri Venkatesha on 28th Nov. 1520 A.D. as mentioned in No. 142 of Vol. III".

"Again, he granted certain lands for the purpose of conducting the charity in the ರಾಮಾನುಜ ಕೂಟಂ (free feeding house) established at Tirumalai and Tirupati on 2nd April 1522 A.D. (Vide No. 153 of Vol. III).

ಕಂದಾಡೈ ಮಾಧವಯ್ಯಂಗಾರ್‌ರವರು ತಮ್ಮ ಗುರುವಿನಷ್ಟು ಎತ್ತರಕ್ಕೆ (ಶಾಸನಗಳ ಅವಲೋಕನದಿಂದ ಮಾತ್ರ) ಏರದಿದ್ದರೂ, ಇವರು ಗಳಿಸಿದ್ದ ಕೀರ್ತಿ, ಪ್ರೇಮಾದರಗಳು, ಕಡಿಮೆಯೇನಾಗಿರಲಿಲ್ಲ.

ಇದೇ ರೀತಿಯಲ್ಲಿ ಕಂದಾಡೈ ಆಂಡಪ್ಪನ್(ಪು.243 ಗ್ಲೊಸರಿ ಸಂಪುಟ), ಕಂದಾಡೈ ಅಪ್ಪಯ್ಯಂಗಾರ್ (ಪು. 244 ಗ್ಲೊಸರಿ ಸಂಪುಟ), ಕಂದಾಡೈ ಅರಿಯ ರಾಮಾನುಜಯ್ಯಂಗಾರ್ (ಪು. 244 ಗ್ಲೊಸರಿ ಸಂಪುಟ); ಕಂದಾಡೈ ಶ್ರೀರಂಗಾಚಾರ್ಯ [ತಂದೆ ಕಂದಾಡೈ ಭಾವನಾಚಾರ್ಯ,ವಾಧೂಲ ಗೋತ್ರ, ಆಪಸ್ತಂಭ ಸೂತ್ರ, ಯಜುಶ್ಶಾಖ, ತಿರುಪತಿಯಲ್ಲಿದ್ದ ಆಚಾರ್ಯ ಪುರುಷ] (ಪುಟ. 245–ಗ್ಲೊಸರಿ ಸಂಪುಟ) ಇತ್ಯಾದಿ ಕಂದಾಡೈ ಹೆಸರು ಹೊತ್ತ ಮಹನೀಯರು, ಇತ್ತ ದತ್ತಿಯ ಶಾಸನಗಳು ಕಂಡು ಬರುತ್ತವೆ.

ಆದರೆ ಇವರೆಲ್ಲ ಮಹನೀಯರು ಕಂದಾಡೈ ರಾಮಾನುಜಯ್ಯಂಗಾರ್‌ರವರ ವಂಶದವರೋ, ಅಥವ (ಗ್ರಾಮವಾಗಿದ್ದರೆ) ಆ ಗ್ರಾಮದವರೋ ಎಂಬುದರ ಬಗೆಗೆ ಸಂಶೋಧನೆ ಅಗತ್ಯ. ಅದೇ ರೀತಿ *ಕಂದಾಡೈ ಅಪ್ಪನ್‌ರವರ ಬಗೆಗೆ ಮತ್ತು ಕಂದಾಡೈ 'ವೇದಾಂತಾಚಾರ್ಯ ಉರುಫ್ ದೊಡ್ಡಯ್ಯಂಗಾರ್ ಅಪ್ಪೈ ರವರ ಬಗೆಗೆ (ವರದಿ ಸಂಪುಟದ ಪುಟ. 217) ಸಂಶೋಧನೆ ಮಾಡುವುದು ಉಚಿತವಾಗಿದೆ.

## ಕಂದಾಡೈ ರಾಮಾನುಜಯ್ಯಂಗಾರ್

(1) "He was the prominent spiritual leader at Tirumalai, and in Tirupati, and the chief disciple of ಅಳಗಿಯ ಮಣವಾಳ ಜೀಯರ್ of Kanchi. He had devoted his life to the cause of religion and the service of the Tirupati temples **and who presumably was the Guru of Saluva Narasimha.** This religions leader had been of much head to him in organising and maintaining the ರಾಮಾನುಜ ಕೂಟಂ (free feeding house) established by Saluva Narasimha both at Tirumalai and in Tirupati and in the recognition thereof Saluva Narasimha appears to have given him a free land in the administration of his ರಾಮಾನುಜ ಕೂಟಂ for which he granted lands and villages. For the various gifts made by this ಕಂದಾಡೈ ರಾಮಾನುಜಯ್ಯಂಗಾರ್ towards the temples of Sri Venkateswara and Sri Govinda

* T.D. Inscriptions Vol. III. P 221—225. Sl. No. 107 (156—G.T.)

1. T.D.E. Glossary P. 244.

Raja; Vide Nos. 13, 14. 15, 22, 23, 24, 26, 33, 36, 38, 39, 40, 44, 45, 47, 81, 85, 128, 134, 135, 140, and 141 of Vol. II and Genealogical Table No. 49 of this Volume".

ಈ ಮೇಲಿನ ಉಲ್ಲೇಖನದಿಂದ ತಿರುಪತಿಯ ಮತ್ತು ತಿರುಮಲೆಯ ಶ್ರೀ ಗೋವಿಂದರಾಜಸ್ವಾಮಿ, ಶ್ರೀ ಶ್ರೀನಿವಾಸರ ಚರಣ ಕಮಲ ಸೇವೆಯಲ್ಲಿ ತಮ್ಮ ಸೇವೆಯನ್ನು ಅರ್ಪಿಸುತ್ತಿದ್ದ ಅಂದಿನ ಭಕ್ತ ವೃಂದದಲ್ಲಿ ಇವರು ಎದ್ದು ಕಾಣುವ ವ್ಯಕ್ತಿಗಳಾಗಿ ಇದ್ದರೆಂದು ಊಹಿಸಲು ಸಾಕಷ್ಟು ನಿದರ್ಶನ ದೊರೆತಂತಾಗಿದೆ.

## ಕಂದಾಡೈ ವಂಶದ ಕೀರ್ತಿ ಕಿರೀಟ

(1) "A third religious teacher, not quite so prominent and famous as the two founders of religious institutions noticed above [(2) ಅಂದರೆ ಅಹೋಬಳ ಮಠದ ಶಠಕೋಪ ಜೀಯರ್ ಸ್ವಾಮಿಗಳು, ವ್ಯಾಸರಾಯ ಮಠದ ವ್ಯಾಸತೀರ್ಥರು], comes to notice in some of these epigraphs. He was ಕಂದಾಡೈ ಮಾಧವಯ್ಯಂಗಾರ್ the disciple of ಕಂದಾಡೈ ರಾಮಾನುಜಯ್ಯಂಗಾರ್, **whom ಸಾಳುವ ನರಸಿಂಹ held in high esteem**, and **appointed as the manager of his ರಾಮಾನುಜ ಕೂಟಂ at ತಿರುಮಲೈ and ತಿರುಪತಿ.** As the disciple of ಕಂದಾಡೈ ರಾಮಾನುಜಯ್ಯಂಗಾರ್, ಮಾಧವ ಅಯ್ಯಂಗಾರ್ occupied the post of the guardian ಕರ್ತಾರ of the gold-treasury (ಪೊನ್‌ಭಂಡಾರಂ) (porpandaram) i.e. the Jewellery and other gold and silver articles belonging to the temple, along with the manage-

1. T.D.E. Report P P. 216—217.
2. —do— P.P. 214—215.

ment of the free feeding-houses (ರಾಮಾನುಜ ಕೂಟಂ) in succession to ರಾಮಾನುಜಯ್ಯಂಗಾರ್ who was first appointed **'ಕರ್ತಾರ' of the porpandaram (ಪೊನ್ ಭಂಡಾರಂ) through an order (ರಾಯಸಂ) of ಸಾಳುವ ನರಸಿಂಹ issued in ಶಕ 1417 Rakshasa** (ರಾಕ್ಷಸನಾಮ 1-7-1495 A.C.) (No. 628—T.T )

"The order authorised ಕಂದಾಡೈ ರಾಮಾನುಜಯ್ಯಂಗಾರ್ the disciple of ಅಳಗಿಯ ಮಣವಾಳ ಜೀಯರ್ (II) of ಕಂಚಿ, the utilise from the aggregate income derived from the village of ನರಸಿಂಗರಾಯಪುರಂ established by ರಾಮಾನುಜಯ್ಯಂಗಾರ್ in the name of the Rayar (ರಾಯರು)" ಎಂದು ಮುಂದೆ ಯಾವ ಯಾವ ಸೇವೆಗಾಗಿ ಇದರ ಬಳಕೆಯಾಗ ಬೇಕು, ಎಷ್ಟೆಷ್ಟು ಎನ್ನುವುದರ ಬಗೆಗೆ, ಉಲ್ಲೇಖನಗಳು ಸುದೀರ್ಘವಾಗಿ ಕಾಣಬರುವುವು.

"ಅಲ್ಲದೆ.- .**ರಾಮಾನುಜಯ್ಯಂಗಾರ್ appears to have wielded great influence over ಸಾಳುವ ನರಸಿಂಹ whose establishment of the ರಾಮಾನುಜ ಕೂಟಂ (ಸ್) both at ತಿರುಮಲೈ and ತಿರುಪತಿ** as well as donations and grants to the temple are traceable to this religious preceptor's initiative [Page 49 ante of T.D.E.Repot]. **His religious activities were continued to ತಿರುಪತಿ and here to the community of the Sattada [Shaathada-Sri-ಶಾತ್ತಾದ ಶ್ರೀವೈಷ್ಣ (ವಾಸ್) ವರ್ಗಳ್] Sri Vishnavas. In his later days he visited the 108 ತಿರುಪತಿ(ಸ್) or the religious centres sacred to Vishnu, and on returning to ತಿರುಮಲ from his**

**religious tour, he had gilded the doors and door-jambs of the passage leading into the inner shrine and the ವೈಕುಂಠ passage round the central shrine of Sri Venkatesha's temple." (No. 494 T.T.)**

ಇಲ್ಲಿ ಒಂದು ಮಾತು ಗಮನಿಸುವುದು ಅಗತ್ಯ. ಸಾಳುವ ನರಸಿಂಹ ರಾಜನ ಮೇಲೆ ಇವರಿಗಿದ್ದ ಸತ್ಪ್ರಭಾವದ ಬಗೆಗೆ ಇರುವ ಒಂದು ಅಭಿಪ್ರಾಯವು ಇಂತಹ ನಿದರ್ಶನದ ಕೃತಿಗಳಿಂದ ಮತ್ತೆ ಮತ್ತೆ ದೃಢವಾಗುತ್ತಿದೆ, ಮತ್ತು ಮಿರಿಮಿರಿಯಾಗಿ ಮಿನುಗುಟ್ಟುತ್ತಿರುತ್ತದೆ. ಅಲ್ಲದೆ ಇವರು ತಿರುಪತಿಯ ಆಸುಪಾಸಿನಲ್ಲಿದ್ದ **ಶಾತ್ತಾದ ಶ್ರೀವೈಷ್ಣವರಿಗೆ** ಧಾರ್ಮಿಕ ದಿಗ್ದರ್ಶಕರಾಗಿದ್ದರೆಂದೂ ಕಾಣುತ್ತದೆ.

ಅಲ್ಲದೆ ಅವರು ತಮ್ಮ ತೀರ್ಥಯಾತ್ರಾ ಮಾರ್ಗದಲ್ಲಿ *108 ಪ್ರಸಿದ್ಧ ವಿಷ್ಣು ದೇವರುಗಳ ದರ್ಶನ ಪಡೆದಿದ್ದರೆಂಬುದು ಸ್ಪಷ್ಟವಾಗಿ ಕಂಡು ಬಂದಿದೆ. ಈ ಭಕ್ತ ಶಿರೋಮಣಿಯು ತನ್ನ ಯಾತ್ರೆಯ ಮಾರ್ಗದಲ್ಲಿ ಮೈಸೂರು ರಾಜ್ಯದ **ಮೇಲುಕೋಟೆಗೂ**, ಮೈಸೂರು ಬಳಿಯ **ಶ್ರೀರಂಗ ಪಟ್ಟಣದ** ಮಂದಿರಕ್ಕೂ ಬಹುಶಃ ಭೇಟಿ ಇತ್ತಿರಬಹುದೆಂದು ಊಹಿಸಲು ಪ್ರಬಲ ಸುಳಿವು ಸಿಕ್ಕುವುದು. ಸ್ವಯಂ ರಾಮಾನುಜಾಚಾರ್ಯರಿಂದಲೇ ಪುನರ್ ಪ್ರತಿಷ್ಠಾಪಿಸಲ್ಪಟ್ಟ ಯಾದವಗಿರಿಯ ಮಹಾನ್ ಮಂದಿರ (ಮೇಲುಕೋಟೆ) ದ ಹಾಸುಗಲ್ಲಿನ ಮೇಲೆ, ತನ್ನ ಮೈ ಚಾಚಿ ಮಲಗಿ; ಸಾಷ್ಟಾಂಗ ನಮಸ್ಕಾರ ಮಾಡಿದ್ದರೂ ಇರಬಹುದು. ಆದರೂ ಇದರ ಬಗೆಗೆ ಹೆಚ್ಚಿನ ಸಂಶೋಧನೆ ಅಗತ್ಯ.

ಇಂತಹ ದಿವ್ಯ ದೇಶಗಳ ಪರ್ಯಟನೆ ನಂತರ ಈ ಭಕ್ತಿ ಭಂಡಾರಿಗೆ ಉತ್ಸಾಹ ಉಕ್ಕೇರಿರಬೇಕು. ಆದ್ದರಿಂದಲೇ ಆ ದೂರಲೋಕದ ನೈಜ ವೈಕುಂಠವಂತೆ, ಈ ಭೂಲೋಕದ ವೈಕುಂಠವನ್ನು ತುಸು ಮಾರ್ಪಡಿಸಲು ಆಲೋಚಿಸಿರಬೇಕು. ಇದರ ಬಗೆಗೆ ಉಲ್ಲೇಖ ಇಂತಿದೆ :—

---

ಈ ನೂರೆಂಟು ದಿವ್ಯ ಕ್ಷೇತ್ರಗಳು ಯಾವುವು ಎಂಬುದು ನಮಗೂ ಪೂರ್ಣವಾಗಿ ಗೊತ್ತಿಲ್ಲ. ಸಂಪಾದಕ,

(1) "He had gilded the doors and door-jambs (ಬಾಗಿಲು ವಾಡಗಳು) of the passage leading into the inner shrine, and the ವೈಕುಂಠ passage, round the central shrine of Sri Venkatesha's temple." (No. 494–T.T.)

ಭಕ್ತರು ಕಲ್ಪಿಸುವ ನೈಜ ವೈಕುಂಠದ ಒಂದು ಅಂಶವನ್ನು ಭೂ ವೈಕುಂಠದಲ್ಲಿ ನಿರ್ಮಿಸಿದ [ಪ್ರ–ಪ್ರಥಮ ಎಂದರೂ ಬಾಧಕವಿಲ್ಲ] **ರೂವಾರಿಯೆಂದರೂ**; ಭಗವಂತನ ಅಭೀಷ್ಟವನ್ನೇ ಪ್ರತ್ಯಕ್ಷವನ್ನಾಗಿಸಿದ **ಸ್ಥಪತಿ** (engineer) ಎಂದರೂ ಒಪ್ಪಿಗೆಯೇ ವಿನಃ; ಹೊಗಳಿಕೆಯ ಹುಡಿ ಎರಚಿದಂತೆ ಕಾಣುವುದಿಲ್ಲ. ಇಂತಹ ಭವ್ಯ ಭಾಗ್ಯ, ಕಂದಾಡೈ ರಾಮಾನುಜಯ್ಯಂಗಾರ್‌ರವರದು.

ಆದರಿಂದಲೇ :– (2) **His greatness and his service were so far recognised, as to permit the chanting of his (3) ಉಲಾ in the presence of the deity at the time of the smearing of the deity's holy body, with civet oil (ಪುನಗು ಎಣ್ಣೆ) immediately after the holy bath for HIM on alternate Fridays."** (No. 336–T.T.) ಇಂತಹ ಮುತ್ತಿನಂತಹ ಮಾತಿಗೆ ಮತ್ತೆ ವಿವರಣೆಯ ಮಂಗಳಾರತಿಯೇಕೆ ?

---

1. T.D.E. Report P. 217.

2. ಈ ವಿಷಯವನ್ನು (T.D.E. Report ಪುಟ 217ರಲ್ಲಿ) T.T. 494ನೇ ಶಾಸನ ಹೇಳುತ್ತದೆ ಎಂದು ಉಲ್ಲೇಖಿಸಲಾಗಿದೆ. ಆದರೆ; T.D.E. Inscriptions Vol. II ಪುಟ 19 ರಲ್ಲಿರುವ T.T. 494ನೇ ಶಾಸನದಲ್ಲಿ ದ್ವಾರಗಳನ್ನು ಸುವರ್ಣಮಯವಾಗಿಸಿದ ಉಲ್ಲೇಖ ಬರುವುದಿಲ್ಲ. ಮತ್ತು ಸುವರ್ಣ ದ್ವಾರದ ಉಲ್ಲೇಖ ಬರುವ ಶಾಸನದ ಸಂಖ್ಯೆ ಯಾವುದು ಎಂಬುದನ್ನು ಪರಿಶೋಧಿಸುವುದು ಅಗತ್ಯ. ಮೂಲವರದಿಯಲ್ಲಿ ಶಾಸನವನ್ನು ತಪ್ಪಾಗಿ ಉದಹರಿಸಿರಬಹುದು—ಸಂಪಾದಕ.

3. ಉಲಾ (Ula = Encomium or ಸ್ತುತಿ) ಕನ್ನಡದಲ್ಲಿ "ಉಲಿ" (ಮಾತು) ಎನ್ನುವ ಶಬ್ದ, ತಮಿಳಿನ 'ಉಲಾ'ಗೆ ಹತ್ತಿರವಾಗಿದೆ—ಸಂಪಾದಕ.

(1) ಈ ರೀತಿಯಲ್ಲಿ ಕಂದಾಡೈ ರಾಮಾನುಜಯ್ಯಂಗಾರವರ ಸೇವೆಯನ್ನು ಭಗವಂತನಿಗೆ ವರದಿ ಒಪ್ಪಿಸುವಂತಹ ಅಪೂರ್ವ ಗೌರವದ (T.T. 366 ನೇ ಶಾಸನ) ಉಲ್ಲೇಖಗಳು ಇವೆ. ತಿರುಮಲ ದೇವೀಪುರವನ್ನು ಶ್ರೀನಿವಾಸನ ಸೇವೆಗಾಗಿ ಶ್ರೀ ಭಂಡಾರಕ್ಕೆ ಅರ್ಪಿಸಿದುದೂ (No. 601T.T. on 28-11-1520 A.C.) ; ಅದರಂತೆಯೇ ಭಂಡಾರವಾಡೈ ಗ್ರಾಮವನ್ನು ಅಲಮೇಲು ಮಂಗೈ ನಾಚ್ಚಿಯಾರ್‌ರವರ ಮತ್ತು ಇತರೆ ಶ್ರವೃತ್ತಿಗಾಗಿ (ಸೇವೆಗಳಲ್ಲಿ) ಅರ್ಪಿಸಿದಿದೂ; ಇದೇ ರೀತಿಯಲ್ಲಿ ಅರ್ಪಿತವಾದ (G.T. 107 dated 2-4-1522 A.C.) ಶಾಸನಗಳು ಕಂದಾಡೈ ಮಾಧವಯ್ಯಂಗಾರ್ ರವರು ಸಲ್ಲಿಸಿದ ಸೇವೆಗಳಿಗೆ ಸಾಕ್ಷಿಗಳಾಗಿವೆ.

"A later member of this (ಕಂಪಾಡೈ ರಾಮಾನುಜ ಅಯ್ಯಂಗಾರ್) family, viz. ಕಂದಾಡೈ ಕುಮಾರ ರಾಮಾನುಜ ಅಯ್ಯಂಗಾರ್, presented a wooden car (ರಥ) to the temple of ಶ್ರೀರಾಮ, on the 18th day of TAI, in the cyclic year ವಿರೋಧಿ (14-1-1530 A.C.) for the merit of the king ಅಚ್ಯುತರಾಯ ಮಹಾರಾಯ (318. T.T.).

ಇದೇ ವಂಶದವರೆಂದು ಊಹಿಸಲಾಗುವ ಕಂದಾಡೈ ವೇದಾಂತಾಚಾರ್ಯ (ಇವರೇ ದೊಡ್ಡಯ್ಯಂಗಾರ್ ಅಪ್ಪೈ) ರವರ ಸೇವೆಯನ್ನು ಸ್ಮರಿಸದೆ, ಕಂದಾಡೈ ಕುಲದವರ ಪೂರ್ಣ ಸೇವೆಯ ಪೂರ್ಣ ಪರಿಚಯ ಮಾಡಿಕೊಂಡಂತಾಗುವುದಿಲ್ಲ. ಆದ್ದರಿಂದ :—

(2) " ಕಂದಾಡೈ ವೇದಾಂತಾಚಾರ್ಯ alias ದೊಡ್ಡಯ್ಯಂಗಾರ್-ಅಪ್ಪೈ was probably a member of a collateral (ಸಗೋತ್ರ) branch of the family to which ಕಂದಾಡೈ

---

1. T.D.E. Report P. 217.
2. T.D.E. Report P. 217—218.

ರಾಮಾನುಜಯ್ಯಂಗಾರ್ and others noticed above belonged. He was the son of ವೆನ್ರುಮಾಲ್ಯೆಯಿಟ್ಟ ಪೆರುಮಾಳ್ ನಾಯನಾರ್ (ಶ್ರೀನಿವಾಸಾಚಾರ್ಯ-ಸಂಪಾದಕ) of the ವಾಧೂಲ ಗೋತ್ರ and ಆಪಸ್ತಂಬ ಸೂತ್ರ and resided at ಘಟಿಕಾಚಲಂ or ಶೋಲಿಂಗೂರ್. He was a reputed scholar, known as ಮಹಾಚಾರ್ಯ or ದೊಡ್ಡಾಚಾರ್ಯ and wrote the works ಪಂಚವಿಜಯ, ಚಂಡಮಾರುತ, ಅದ್ವೈತ ವಿದ್ಯಾ-ವಿಜಯ etc."

ಈ ಶಿಲಾ ಶಾಸನಗಳ ಮುಖಾಂತರ ಬೆಳಕಿಗೆ ಬಂದಿರುವ ಈ ವೇದಾಂತಾಚಾರ್ಯರು ಕಂದಾಡೈ ಕುಲದಲ್ಲಿ ಕೊನೆಯವರಲ್ಲವಾದರೂ, ತಮ್ಮ ಪಾಂಡಿತ್ಯದ ದೆಸೆಯಿಂದ ಪ್ರಾಧಾನ್ಯತೆಯಲ್ಲಿ ಕೊನೆಯವರಂತೂ ಆಗಲು ಸಾಧ್ಯವಿಲ್ಲ. ಅಲ್ಲದೆ (1) ಕೋಯಿಲ್ ಕಂದಾಡೈ ಅಣ್ಣನ್ ಮತ್ತು (2) ಕಂದಾಡೈ ಅಪ್ಪನ್ (ವಾಧೂಲ ಗೋತ್ರ, ಆಪಸ್ತಂಬ ಸೂತ್ರ, ಯಜುಶ್ಶಾಖ) ರವರ ಬಗೆಗೆ, ಇನ್ನೂ **ಹೆಚ್ಚಿನ ಸಂಶೋಧನೆ ಆಗತ್ಯವಾಗಿದೆ.**

## ಕೊನೆಯ ಕುತೂಹಲ

(3) ಪೆದ್ದ ತಿರುಮಲಯ್ಯಂಗಾರ್ ಎನ್ನುವ ಮಹಾನುಭಾವರು, ಅನೇಕ ದೊಡ್ಡ ದತ್ತಿಗಳನ್ನು ಕೊಟ್ಟ ಅತಿದೊಡ್ಡ ವ್ಯಕ್ತಿಗಳಲ್ಲಿ ಒಬ್ಬರಾಗಿದ್ದಾರೆ. ಇವರು, ತಮ್ಮ ತಂದೆಯಂತೆಯೇ ತೆಲಗು ವಿದ್ವಾಂಸರು; ತಂದೆಯುವರು ಸ್ವಯಂ ಸಂಗೀತ ರಚನಕಾರರು, ಮತ್ತು ಸಂಗೀತಗಾರರು. ಇವರು ಅಣ್ಣಮ ಅಯ್ಯಂಗಾರ್‌ರವರ ಪುತ್ರರೆಂದು ಭಾವಿಸಲಾಗಿದೆ. ಇವರ ಹೆಸರಿನಲ್ಲಿ ಹತ್ತಾರು ದೊಡ್ಡ ದತ್ತಿಗಳು ಇರುವುದು ಕಂಡು ಬಂದಿದೆ. ಅದರಲ್ಲೂ ಮುಖ್ಯವಾಗಿ ತಿರುಮಲೈ ದೇವಸ್ಥಾನದ ಶಾಸನವಾದ 76 (30-11-1517 ಕ್ರಿ.ಶ) ನೇ

1. T.D.E. Report P. 277
2. —do— P. 295.
3. T.D.E. Report P.P. 285 to 287.

ನಂಬರಿನ ಶಾಸನದಂತೆ 1500 ನಾರ್ಪಣಂಗಳನ್ನು ಅರ್ಪಿಸಿದರೆ; 589 ನೇ ಶಾಸನದಂತೆ (28–11–1530 ಕ್ರಿ.ಶ.) ಅವರು ನಾಲ್ಕೂವರೆ ಗ್ರಾಮಗಳನ್ನೇ ದತ್ತಿಯಾಗಿ ನೀಡಿ ಎತ್ತರಕ್ಕೇರಿದ್ದಾರೆ.

ತಿರುಮಲೈ ದೇವಸ್ಥಾನದ 588 ನೇ ಶಾಸನದಂತೆ ಶ್ರೀನಿವಾಸನಿಗೆ ಪ್ರತಿ ದಿನವೂ (ತಿರು ಯಜ್ಞೋಪವೀತಂ–ಪೂನ್ನೂಲ್) ನೀಡುವ ಸೇವೆಯನ್ನು, ಅದಕ್ಕಾಗಿ 1000 ರೇಖೆ ಪೊನ್ ಆದಾಯ ಬರುವ ಎರಡು ಗ್ರಾಮಗಳನ್ನು ದತ್ತಿಯಾಗಿ (ಕ್ರಿ.ಶ. 1532) ಬಿಟ್ಟು ಕೊಟ್ಟಿದ್ದಾರೆ. ಆದರೆ ಈ ಎರಡು ಗ್ರಾಮಗಳು ಈ ಹಿಂದೆ ಮಹಾರಾಜ ಅಚ್ಯುತರಾಯನು ತಿರುಮಲಯ್ಯಂಗಾರ್ ರವರಿಗೆ ದತ್ತಿಯಾಗಿ ನೀಡಲ್ಪಟ್ಟ ಗ್ರಾಮಗಳಾಗಿದ್ದವು ಎನ್ನುವುದು, ಅದನ್ನು ತಾವೇ ಅನುಭವಿಸದೆ; ಭಗವಂತನ ಸೇವೆಯಲ್ಲಿ ಅರ್ಪಿಸಿದರು ಎನ್ನುವ ವಿಷಯ ಗಹನವಾದುದು. ಅದೇ ರೀತಿಯಲ್ಲಿ ತಿರುಮಲೈ ದೇವ ಮಂದಿರದ 497ನೇ ಶಾಸನವು (17–5–1535 ಕ್ರಿ.ಶ.) ಮತ್ತು 278 ನೇ ಶಾ ಸ ನ ವೂ (26–2–1536 ಕ್ರಿ.ಶ.), ಇವರು ಸೇವೆಗಾಗಿ ನೀಡಿದಂತಹ ಅನೇಕ ಶಾಸನ ಗಳ ಪೈಕಿ, ಇವು ಸಾಕ್ಷಿ ಶಾಸನಗಳಾಗಿರುತ್ತವೆ.

(1) ಪ್ರಪ್ರಥಮವಾಗಿ ಪ್ರಾರಂಭಿಸಲ್ಪಟ್ಟಿದ್ದೆಂದು ಊಹಿಸಲಾಗುವ ತಿರುಕ್ಕೋಡಿ ತಿರುನಾಳ್ ಎಂಬ ಉತ್ಸವದ ಸೇವೆಗೆ ತಿರುಮಲೈ ಮಂದಿರದ ಶಾಸನವಾದ 683 (ಕ್ರಿ.ಶ. 1537) ವನಭೋಜನದ ಸೇವೆಗೆ ಮುಡಿಪಾಗಿದೆ. ಇದೇ ರೀತಿಯಲ್ಲಿ ಈ ಮಹನೀಯರ ಸೇವೆಯನ್ನು ನಿರೂಪಿಸಲಾದ 497, 587, 683, 457, 589, 682, ಇತ್ಯಾದಿ ಶಾಸನಗಳು ಇವೆ.

ಅಲ್ಲದೆ ನಮ್ಮಾಳ್ವಾರರ ಸೇವೆಯಲ್ಲಿ (ಗೋವಿಂದರಾಜಸ್ವಾಮಿ ಮಂದಿರದ 393ನೇ ಶಾಸನ) ಕ್ರಿ.ಶ. ತಾ॥ 19–3–1545 ರ ಶಾಸನವೂ ಒಂದಿದೆ. (2) ಇದೇ ಮಂದಿರದ 394 ನೇ ಶಾಸನವು ಗೋವಿಂದರಾಜನ ಸೇವೆಯಲ್ಲಿದೆ.

---

1. T.D.E. Report P. 287 to 290.
2. —do— P. 291.

ಹಾಗೆಯೇ ತಿರುಮಲೈ ಮಂದಿರದ 457, 681 ನೇ ಶಾಸನಗಳು–ಪ್ರಥಮವಾಗಿ ಶ್ರೀನಿವಾಸನಿಗಾಗಿ ಪ್ರಾರಂಭಿಸಲ್ಪಟ್ಟಿತೆನ್ನುವ ಬ್ರಹ್ಮರಥೋತ್ಸವ ಸೇವೆಗಾಗಿ–ಅರ್ಪಿತವಾಗಿದೆ. ಅಲ್ಲದೆ 683 ಮತ್ತು 457 ನೇ ಶಾಸನಗಳೂ ಅಷ್ಟೇ ಪ್ರಾಮುಖ್ಯತೆಯನ್ನು ಪಡೆದಿವೆ.

(1) ಗೋವಿಂದರಾಜಸ್ವಾಮಿ ಮಂದಿರದ 419 ನೇ ಶಾಸನವು—ಶ್ರೀರು ತಿರುಮಲಯ್ಯಂಗಾರ್‌ರವರ ಮಕ್ಕಳಾದ, ಅಂದರೆ ದೊಡ್ಡ ತಿರುಮಲ ಅಯ್ಯಂಗಾರ್‌ರವರ ಮೊಮ್ಮಕ್ಕಳಾದ ತಿರು ತಿರುವೇಂಗಳಪ್ಪನ್‌ರವರ—ಹೆಸರಿನಲ್ಲಿದೆ. [ದೊಡ್ಡ ತಿರುಮಲಯ್ಯಂಗಾರ್‌ರವರ ಮಕ್ಕಳಿಗೆ ಚಿನ್ನ ತಿರುಮಲಯ್ಯಂಗಾರ್, ಚಿನ್ನನ್ನ, ಚಿನ್ನ ತಿರುಮಲಾಚಾರ್ಯ ಇತ್ಯಾದಿ ಹೆಸರುಗಳೂ ಇವೆ. ಸಂ.]

ಹೀಗೆ (2) ದೊಡ್ಡ ತಿರುಮಲಯ್ಯಂಗಾರ್‌ರವರ ಹೆಸರು, ಅವರ ವಂಶವು ಕಂದಾಡೈ ರಾಮಾನುಜಯ್ಯಂಗಾರ್‌ರವರ ನಂತರ ಬರುವ ಭಕ್ತರ ಬಳಗದಲ್ಲಿ ಭವ್ಯವಾಗಿ ಎದ್ದು ಕಾಣುತ್ತದೆ.

(3) ಈ ಪೆದ್ದ ತಿರುಮಲಯ್ಯಂಗಾರ್‌ರವರ ವಂಶದವರ ದತ್ತಿ ಸೇವೆಯು ಹಂಪೆಯ ವಿರೂಪಾಕ್ಷನಿಗೂ, ಕಾಂಜೀವರಂನ ಅರುಳಾಳಪ್ಪೆರುಮಾಳ್‌ಗೂ ಸಲ್ಲಿಸಲ್ಪಟ್ಟಿರುವುದು, ಇತರೆ ಶಾಸನಗಳಿಂದಲೂ ಕಂಡು ಬಂದಿದೆ.

(4) ತಿರುಮಲೈ ಮಂದಿರದ 450 ನೇ ಶಾಸನವು (ಕ್ರಿ. ಶ. 1545) ಶ್ರೀನಿವಾಸ ದೇವರಿಗೆ ನಾಲ್ಕು ರಾಜಾನ್ನ ನೈವೇದ್ಯ (ತಳಿಗೆ) ವನ್ನು ಈ ತಿರುಮಲಯ್ಯಂಗಾರ್‌ರವರ ದತ್ತಿಯೆಂದು ಹೇಳುತ್ತದೆ. ಈ ನೈವೇದ್ಯಕ್ಕೆ ವರ್ಷಕ್ಕೆ 114 ರೇಖೆ 2¼ ಪಣಂನ ಅಗತ್ಯವಿತ್ತೆಂದೂ, ಇದಕ್ಕಾಗಿ ಅವರು

1. T.D.E. Report P. 289.

2. ದೊಡ್ಡ ತಿರುಮಲಯ್ಯಂಗಾರ್, ತಿರುಮಲಾಚಾರ್ಯ ದೀಕ್ಷಿತ, ಪಲ್ಲಿಪಾಕಂ ತಿರುಮಲಾಚಾರ್ಯ ದೀಕ್ಷಿತ, ತಿರುಮಲಯ್ಯಂಗಾರ್ ಇತ್ಯಾದಿ ಒಂದೇ ಹೆಸರು. ಸಂ.

3. T.D.E. Report P. 291.

4. —do— P. 290.

ಕರಿಯಪಲ್ಲಿಯ (ವಿಭಾಗದ) ಗಂದಮ ತಿಮ್ಮಾಪ್ರುರಂ ಗ್ರಾಮವನ್ನು ದತ್ತಿಯಾಗಿ ಬಿಟ್ಟರೆಂದು, ಇದರಿಂದ 100 ರೇಖೆ ಮಾತ್ರ ಉತ್ಪತ್ತಿ ಬಂದು, ಉಳಿಕೆ 14 ರೇಖೆ $2\frac{1}{8}$ ಪಣಂ ಕೊರತೆ ಬೀಳುತ್ತಿದ್ದಿತೆಂದು ತಿಳಿದು ಬರುತ್ತದೆ.

(1) ಈ ಕೊರತೆ ಬಗೆಗೆ :– ........ and this sum, ತಿರುಮಲ ಅಯ್ಯಂಗಾರ್ had to pay into the temple treasury each year. His disciple ಶ್ರೀ ಪಾಲಿಪಟ್ಟಯಂ arranged on this occasion for the propitiation of the processional immage on the car (ರಥ) during the ಆಣಿ ತಿರುನಾಳ್ on the 8th day in front of ತಿರುಮಲ ಅಯ್ಯಂಗಾರ್ಸ್ (ರವರ) house at ತಿರುಮಲ and of ಶ್ರೀ ಗೋವಿಂದ ರಾಜ on the 10th day of **His** ಆಣಿ ತಿರುನಾಳ್ at the time **His** proceeding to the ತಿರುಪ್ಪಾಲಿ–ಓಡಂ, out of the capital of 16 ರೇಖೈ, paid by him on the above date. **This ಪಾಲಿಪಟ್ಟಯಂ, the disciple of ತಿರುಮಲ ಅಯ್ಯಂಗಾರ್, is stated to be the son of ನರಸಯ್ಯನ್, belonging to the ಶಾತ್ತಾದ–ಶ್ರೀವೈಷ್ಣವ community which inhabited a part of ತಿರುಪತಿ denominated ಕುಲಶೇಖರ ಪುರಂ. Probably his other disciples, viz; ಶ್ರೀಪತಿ ತೊಂಡಯ್ಯನ್ noticed in No. 681–T.T; above was also a ಶಾತ್ತಾದ–ಶ್ರೀವೈಷ್ಣವ, and it seems likely that, like ಕಂದಾಡೈ ರಾಮಾನುಜಯ್ಯಂಗಾರ್ of the preceeding century, ತಾಳ್ಳಪಾಕ ತಿರುಮಲಯ್ಯಂಗಾರ್ too had brought into the fold of his disciples certain members of the ಶಾತ್ತಾದ ಶ್ರೀವೈಷ್ಣವ community.**

---

1. T.D.E. Report P. 290 second half of first para.

ಇದರಿಂದ ಈ ದೊಡ್ಡ ತಿರುಮಲಯ್ಯಂಗಾರ್‌ರವರು–ಪಾಲಿಪಟ್ಟೆಯಂ ಎಂಬ ಶಿಷ್ಯರು ಶಾತ್ತಾದ ಶ್ರೀವೈಷ್ಣವರಾದ್ದರಿಂದ–ಪಾಲಿಪಟ್ಟೆಯಂ ಎನ್ನುವವರಿಗೆ ಗುರುಗಳಾಗಿದ್ದರೆಂದು ತಿಳಿದು ಬಂದಿರುವುದರಿಂದ ಇವರೂ ಶಾತ್ತಾದ ಶ್ರೀವೈಷ್ಣವ ಭಕ್ತರ ಗುರುಗಳಲ್ಲಿ ಅಗ್ರಗಣ್ಯರಾಗಿದ್ದರೆನ್ನಬಹುದು.

ಆದರೆ :–

" (1) **Having orginally been, a ಸ್ಮಾರ್ತಬ್ರಾಹ್ಮಣ who subsequently adopted the ವೈಷ್ಣವ tenets from the example of his father** (2) **ಅಣ್ಣಮಾಚಾರ್ಯ; ತಿರುಮಲಯ್ಯಂಗಾರ್ became a staunch adherent of the ರಾಮಾನುಜ faith, and a respected ಆಚಾರ್ಯ with a following of disciples, through intensive study of the ವೈಷ್ಣವ religious lore and philosophy and through deep devotion to God ತಿರುವೆಂಕಟನಾಥನ್ earned the title "ವೇದಮಾರ್ಗ – ಪ್ರತಿಷ್ಠಾಪನಾಚಾರ್ಯ" as given in No. 8 of 1904 noticed above.** [ಅಣ್ಣಮಾಚಾರ್ಯರಿಗೆ "ಸಂಕೀರ್ತನಾಚಾರ್ಯ, ದ್ರವಿಡಾಗಮ ಸಾರ್ವಭೌಮ, ಮತ್ತು ಪಂಚಾಗಮ ಚಕ್ರವರ್ತಿ, ಎಂಬ ಬಿರುದೂ ಇತ್ತು. ಸಂಪಾದಕ.]

ತಿರುಮಲಾಚಾರ್ಯರು, ಅವರ ತಂದೆ ಅಣ್ಣಮಾಚಾರ್ಯರು ಮೊದಲು ಸ್ಮಾರ್ತ ಬ್ರಾಹ್ಮಣರಾಗಿದ್ದು, ವಿಶಿಷ್ಟಾದ್ವೈತ ಮಾರ್ಗಕ್ಕೆ ಮಾರುಹೋಗಿ ಭಕ್ತಿ ಪಂಥದಲ್ಲಿ ಮುಂದುವರೆದು, ವೇದಮಾರ್ಗ ಪ್ರತಿಷ್ಠಾಪನಾಚಾರ್ಯ ರೆಂಬ ಬಿರುದು ಪಡೆದುಕೊಳ್ಳುವಷ್ಟು ವಿದ್ವತ್ತು, ಪ್ರತಿಭೆಯನ್ನು ಸಂಪಾದಿಸಿ ಕೊಂಡಿದುದು ಭಕ್ತಿಯ ಇತಿಹಾಸದಲ್ಲಿ ಅಪೂರ್ವ ಘಟನೆ. ಈ ಹಿಂದೆ

---

1. T.D.E. Report P. 291.

2. ಅಣ್ಣಮಾಚಾರ್ಯ, ಅಣ್ಣಮಾರ್ಯ, ಅಣ್ಣಮಯ್ಯಂಗಾರ್, ಅಣ್ಣಮಯ್ಯ ಇತ್ಯಾದಿ ಹೆಸರು ಒಬ್ಬರಿಗೇ ಇವೆ. ಅವರು ಶ್ರೀ ವೈಷ್ಣವರಾದ ಮೇಲೆ ಆಚಾರ್ಯ ಅಯ್ಯಂಗಾರ್ ಎಂದು ಕರೆಯಲಾಗುತ್ತಿದೆ. ಸಂಪಾದಕ.

ಹನ್ನೊಂದು–ಹನ್ನೆರಡನೇ ಶತಮಾನದಲ್ಲಿ (ಭಗವಾನ್) ರಾಮಾನುಜರ ಪ್ರಥಮ ಗುರುಗಳಾಗಿದ್ದ ಯಾದವ ಪ್ರಕಾಶರು ಮೊದಲು ಸ್ಮಾರ್ತರಾಗಿದ್ದು, ತನ್ನ ಶಿಷ್ಯರಿಂದಲೇ ದೀಕ್ಷೆ ಪಡೆದು ಶ್ರೀವೈಷ್ಣವರಾಗಿ ಪರಿವರ್ತಿತರಾಗಿ, ತನ್ನ ಹೊಸ ಗುರುವಿನ ಅಭೀಷ್ಟೆಯಂತೆ (1) "ಯತಿಧರ್ಮ ಸಮುಚ್ಚಯ" ಎಂಬ ಗ್ರಂಥ ರಚನೆಮಾಡಿದರು. ಇಂತಹ ಅಪೂರ್ವ ಸನ್ನಿವೇಶ ಆಗಿ ಹೋದಮೇಲೆ, ಮತ್ತೆ ಮೂಡಿ ಬಂದಿರುವುದು ದೊಡ್ಡ ತಿರುಮಲಯ್ಯಂಗಾರ್‌ರವರ ವಿಷಯದಲ್ಲೇ !

ಅಲ್ಲದೆ ಇವರು ಅನೇಕ ಶಾತ್ತಾದ ಶ್ರೀವೈಷ್ಣವರಿಗೂ—ಹಿಂದಿನ ಶತಮಾನದ ಕಂದಾಡೈ ರಾಮಾನುಜಯ್ಯಂಗಾರ್‌ರವರಂತೆ–ಗುರುಗಳಾಗಿದ್ದಾರೆಂದು ನಿಚ್ಚಳ ಉಲ್ಲೇಖ ಇರುವುದರಿಂದ; ಇವರೂ ಶಾತ್ತಾದ ಶ್ರೀವೈಷ್ಣವರಾಗಿದ್ದರೆಂದು **ನಂಬದೆ** ಇರಲು ಸಾಕಷ್ಟು ಕಾರಣಗಳು **ಕಾಣಬರುತ್ತಿಲ್ಲ.** ಅಲ್ಲದೆ ಇವರು **ಶಾತ್ತಾದ ಶ್ರೀವೈಷ್ಣವರಿಗೆ** ಗುರುಗಳಾಗಿದ್ದರೂ, ತಾವು ಮಾತ್ರ **ಶಾತ್ತಿನಿ ಶ್ರೀವೈಷ್ಣವರಾಗಿಯೇ** ಉಳಿದುಕೊಂಡಿದ್ದರೆಂಬುದನ್ನು ದೃಢೀಕರಿಸಲು ಅಗತ್ಯವಾದ ಕುರುಹೂ ಕಾಣಬರುತ್ತಿಲ್ಲ.

## ಕಂದಾಡೈ ಕುಮಾರ ರಾಮಾನುಜಯ್ಯಂಗಾರ್

(2) ಇವರ ಬಗೆಗೆ 31–3–1530 (ಕ್ರಿ.ಶ.) ರಲ್ಲಿ ಬಹು ದೀರ್ಘವಾದ ತಿರುಮಲೆಯ 608 ನೇ ಶಾಸನವಿದೆ. ಈ ಶಾಸನದ ನಿರ್ವಚನದಂತೆ **ತಮ್ಮ** ತಂದೆ ಕಂದಾಡೈ ರಾಮಾನುಜಯ್ಯಂಗಾರ್‌ರವರಂತೆ ಇವರೂ **ರಾಮಾನುಜ**

---

1. Life of Sri Ramanuja by Swami Ramakrishnananda. P. 139.

2. **T.D.** Inscriptions Vol. IV. P. P. 2 to 11.

[ಕಂದಾಡೈ ಮಾಧವಯ್ಯಂಗಾರ್‌ರವರು ಪರಮಪದವನ್ನು ಹೊಂದಿದ ಮೇಲೆ, ಕಂದಾಡೈ ರಾಮಾನುಜಯ್ಯಂಗಾರ್‌ರವರು ತಮ್ಮ ವಂಶದ ವೃತ್ತಿಯನ್ನು ವಹಿಸಿಕೊಂಡಿದ್ದಾರೆಂದು ನಿರ್ಧರಿಸಬಹುದು.—ಸಂಪಾದಕ.)

ತಿರುಮಲೈ ಶಾಸನ 413 ಮತ್ತು 547ರ ರಂತೆ ಶ್ರೀನಿವಾಸನಿಗೆ ಇಡ್ಲಿ ಪ್ರಸಾದವು (ಶಾಸನದ ಕಾಲ 16-3-1536, 19-3-1536) ನಿವೇದಿತವಾಗುತ್ತಿತ್ತೆಂದು ತಿಳಿದು ಬಂದಿದೆ.—ಸಂಪಾದಕ.

**ಕೂಟಕ್ಕೂ, ಒಡನೆ-ಭಂಡಾರಕ್ಕೂ** ವ್ಯವಸ್ಥಾಪಕರಾಗಿದ್ದರೆಂದು ತಿಳಿದು ಬರುತ್ತದೆ. ಈ ಶಾಸನದಂತೆ ತಮ್ಮ ಸೇವೆಯ ಕುರುಹಾಗಿ **ಶ್ರೀ ಭಂಡಾರಕ್ಕೆ ಇವರು 8770 ನಾರ್-ಪಣಂ ಸಲ್ಲಿಸಿದ್ದರೆಂದು,** ಇದರ **ಅಂಗವಾಗಿ ಪ್ರಸಾದ ವಿನಿಯೋಗವು ರಾಮಾನುಜನ್ ಬೀದಿಯಲ್ಲಿದ್ದ ರಾಮನುಜಯ್ಯ (ಕಂದಾಡೈ)ನವರ ಮನೆ ಮುಂದೆ** (ಆರು ರಥೋತ್ಸವಗಳ ಸಮಯದಲ್ಲಿ) **ಆಗಬೇಕಾಗಿತ್ತೆಂದು; ಅದರಂತೆಯೇ ರಾಮಾನುಜ ಕೂಟದ ಎದುರಿಗೂ, ಶ್ರೀ ಭಂಡಾರದ ಎದುರಿಗೂ ಆಗಬೇಕಾಗಿತ್ತೆಂದು ತಿಳಿದು ಬರುತ್ತದೆ.**

ಇದೊಂದು ಬಹು ದೀರ್ಘ ಶಾಸನವಾದುದರಿಂದ ಪ್ರತ್ಯೇಕವಾದ ಅಭ್ಯಾಸವೇ ಅಗತ್ಯ. [ಈ 608 ನೇ (ತಿರುಮಲೈ) ಶಾಸನವು ಕಂದಾಡೈ ರಾಮಾನುಜಯ್ಯಂಗಾರ್‌ರವರ ಹೆಸರನ್ನು ಉಲ್ಲೇಖಿಸಿದರೂ, ಇದು ಕಂದಾಡೈ ಕುಮಾರ ರಾಮಾನುಜಯ್ಯಂಗಾರ್‌ರವರದೆಂದು ತಿಳಿದುಕೊಳ್ಳಬೇಕೆಂದು T.T.D. Inscriptions Vol. IV. ಪುಟ 7ರ ಅಡಿ ಟಿಪ್ಪಣಿ ಹೇಳುತ್ತದೆ.]

ಒಟ್ಟಿನಲ್ಲಿ ಕಂದಾಡೈ ಕುಲವು ಸೇವೆಯನ್ನೇ ತನ್ನ ಸರ್ವೋಚ್ಚ ಗುರಿಯಾಗಿಟ್ಟುಕೊಂಡು, ತಮ್ಮ ಜೀವನದ ಸಾರ್ಥಕ್ಯ, ಅಭಿರಮಣೀಯತೆಯನ್ನು ಪಡೆದಿತ್ತೆಂದು ನಿರ್ಧರಿಸಬಹುದು.

# ಅಧ್ಯಾಯ ೩

# ತಿರುನಂದ ವನಗಳು

ಇದುವರೆವಿಗೂ ವಿಷಯ ಪ್ರವೇಶಿಕೆಗೆ ಅಗತ್ಯವಾದ ವಿಷಯ ಕುರಿತು ಅಧ್ಯಯನ ಮಾಡಲಾಯಿತು. ಮುಂದೆ ಶಾಸನಗಳನ್ನೇ ಕುರಿತು ಅಧ್ಯಯನ ಮಾಡುವುದು ಅಗತ್ಯ. ಶಾಸನಗಳ ರೂಪ, ವ್ಯಾಪ್ತಿ, ಕರ್ತೃ, ದತ್ತಿ ಅಥವಾ ಸೇವೆಯ ವೈಶಿಷ್ಟ್ಯ, ಕಾಲ ಇತ್ಯಾದಿಗಳನ್ನು ನೋಡುವುದು ಅಗತ್ಯ. ಈಗ

ಗೋವಿಂದರಾಜಸ್ವಾಮಿ ಮಂದಿರದ (1) ಶಾಸನ 125ರ ಅಗತ್ಯತೆಯ ಹಿನ್ನೆಲೆ ಯನ್ನು ಈ ಕೆಳಗಿನ ಅಧಿಕೃತ ಮಾತುಗಳಿಂದಲೇ ತಿಳಿಯೋಣ:—

"Though instances of the cultivation of flower gardens occur from about 1300 A.C. (125-G.T.) onwards, the numerous cases of forming gardens referred to in the inscriptions of the latter part of the 14th, and the earlier part of 15th centuries indicate, the inadequacy of the supply of flowers, inspite of scores of well maintained gardens dedicated to the temple........ ......................But in 243 T.T., we note that the ತಿರುಪ್ಪಾಣಿಪಿಳ್ಳೈ, i.e., the Officer incharge of Public Works, pertaining to the temple, took up the responsibility for supplying garlands of flowers to the deity on behalf of ಮುಖಪ್ಪಾಳಂ ನಾಗಮನಾಯಕ, a general under Saluva Narasimha Maharaja Udaiyar etc....."

ಸಾಮಾನ್ಯ ಭಕ್ತರು, ಶ್ರೀಮಂತ ಭಕ್ತರೂ ಪುಷ್ಪಪ್ರಿಯನಾದ ಪರಮಾತ್ಮ ನಿಗೆ; ಆತನ ನಿತ್ಯ ಅಲಂಕಾರಕ್ಕೆ ಅಗತ್ಯವಾದ ಹೂಗಳನ್ನು ಒದಗಿಸಲು ಅಸಮರ್ಥರಾದಾಗ, ಆತನ ರೂಪರಾಶಿಯನ್ನು ನೋಡಿ ತಣಿಯಲು ಸಾಕಷ್ಟು ಹೂಗಳಿಲ್ಲದಾಗ, ಮಹಾರಾಜನೊರ್ವನ ಸೇನಾನಿಯು, ಈ ಪವಿತ್ರ ಕೆಲಸಕ್ಕೆ ಹೆಗಲು ಕೊಡಬೇಕಾಯಿತು; ಎನ್ನುವ ಅಂಶ ಇಲ್ಲಿ ಗಮನಿಸಬೇಕಾದ ವಿಷಯ.

---

1. T.D.E. Report p.p. 31-32.

ತುಲಸಿ—**Sacred Basil.**

ಇಂತಹ ಅಗತ್ಯವೂ, ಪರಮ ಪವಿತ್ರವೂ ಆದ ಕಾರ್ಯದಲ್ಲಿ (1) "**It seems very likely that these gardens were in many cases cultivated by ಶಾತ್ತಾದ ಶ್ರೀವೈಷ್ಣವರ್‌ಗಳ್(ಸ್) who are even at the present day under the name of ದಾಸನಂಬೀ (ಸ್) carrying on the service of making flower gardens in the Tirupati Temple** (Nos. 197 and 200 T.T....." [ಪುಟ 9 ನೋಡಿ]

ಈ ಹಿನ್ನೆಲೆಯಲ್ಲಿ ನೇರವಾಗಿ ಈ ಹಿಂದೆ ಹೇಳಿದ ಗೋವಿಂದರಾಜ ಸ್ವಾಮಿ ಮಂದಿರದ 125ನೇ ಶಾಸನವನ್ನು ನೋಡೋಣ :–

Sl. No. 90 (2) (No. 125—G.T.)

[On the north wall (south face within the ಮುಖಮಂಟಪಂ) to the proper left of the entrance into the Central Shrine of ಶ್ರೀ ಗೋವಿಂದರಾಜ in front of the left ದ್ವಾರಪಾಲಕ]. ಮೂಲ ಶಾಸನ ತಮಿಳಿನಲ್ಲಿದೆ:–

* "Hail, Prosperity ! So as to take effect from the ಆಡಿ month of the ರಾಕ್ಷಸ year, corresponding to the 51st year of the ತ್ರಿಭುವನ ಚಕ್ರವರ್ತಿಗಳ್ ಶ್ರೀ ಯಾದವರಾಯ ವೀರ ನರಸಿಂಹದೇವರ್, we, the ತಿರುಪತಿ ಶ್ರೀ ವೈಷ್ಣವರ್‌ಗಳ್, have executed on stone the following document, in favour of ಪಿಳ್ಳೈ ತಿರುವೆಂಕಟಾಚ್ಚಿರುಕ್ಕಾರ್ that they might cultivate a flower garden, named

1. T.D.E. Report p. 31.
2. Tirupati Devasthanam Inscriptions Vol. I, p. 121,

ಇದು ಮೂಲ ತಮಿಳು ಶಾಸನದ ಸರಳಾನುವಾದ—ಸಂಪಾದಕ.

after ಯಾದವ ನಾರಾಯಣನ್ and excavate a pond for cultivating the red-lotus for (the use of) ತಿರು ವೆಂಕಟಮುಡಿಯಾನ್ in the name of ನಾಯನಾರ್ in ಪೆರಿಯ ಮಾಂಬಟ್ಟು a ತಿರುನ್ವೈಡೈಯಾಟ್ಟಂ of ಶ್ರೀ ಗೋವಿಂದ(ರಾಜು)ಪ್ಪೆರುಮಾಳ್ that overflowing (surplus) water be allowed to flow to this (garden), during the time of over-flowing of water in the big tank in Tirupati, that proportional quantity of water be allowed to flow, during the time of limited proportional supply by turns, that a lift be employed in this garden and water baled out, if the tank dries up; that stones (marked) with (ವಿಷ್ಣು) ಚಕ್ರ be not planted in this (garden); that the water of this tank shall flow to the ಮೊಯೋಟ್ಟಸೋಲ್ಯೈ-ತಿರುನಂದವನಂ situated below the tank in accordance with the old practice; that the ಶಿಕ್ಕಿತ್ತ ತಿರುವೆಂಕಟಾಚ್ಚಿರುಕ್ಕಾರ್ them-selves shall take possession of these two flower gardens and manage them conjointly with the ತಿರುಪ್ಪಾಣಿ ಭಂಡಾರಂ, so as to last, as long as the moon and the sun (endure).

May this the ಶ್ರೀ ವೈಷ್ಣವರ್‌ಗಳ್ (ವಾಸ್) protect!"

ಕೆಂದಾವರೆಯಂತಿರುವ (ಶಂಖಾಮೂರ್ತಿ) ಭಗವಂತನ ಪಾದಗಳ ಪೂಜೆಗೆ ಆಗತ್ಯವಾದ ಕೆಂದಾವರೆಗಳನ್ನು (ಹೂ) ಬೆಳೆಯಲು ನಿರಂತರ ಆಗತ್ಯವಾದ ನೀರಿನ ಅವಶ್ಯಕತೆಗೆ, ಎಂತಹ ನೀರಿನ ವ್ಯವಸ್ಥೆಯನ್ನು ಮಾಡಿದ್ದರು ಎಂಬುದನ್ನು; ಮತ್ತು ಈ ಶಾಸನವು (ಹೆಚ್ಚಿನ ಎಲ್ಲ ಶಾಸನಗಳೂ ಸಹ) ಆಚಂದ್ರಾರ್ಕವಾಗಿ ಉಳಿಯಲಿ ಎಂಬ ನಿರ್ದೇಶಿಸಿದ್ದುದನ್ನು ಗಮನಿಸುವುದು ಆಗತ್ಯ.

(1) ಪೆರಿಯಾಳ್ವಾರರು, (2) ತೊಂಡರ ಅಡಿ ಪೊಡಿ ಆಳ್ವಾರರು, (3) ತಿರುಮಳಿಶೈ ಆಳ್ವಾರರು; ಮತ್ತು ಭಗವಂತನ ಕೊರಳನ್ನು ವಿರಾಜಿಸುವ ಹೂ-ಹಾರ ನಿರ್ಮಾಣದಲ್ಲಿ ತೊಡಗಿದ್ದ ಹೂವಾಡಿಗಿತ್ತಿಯಾಗಿದ್ದ (ಪೆರಿಯಾಳ್ವಾರರ ಸಾಕು ಮಗಳು) (4) ಭಗವತಿ ಆಂಡಾಳ್ ದೇವಿಯರು; ತಮ್ಮ ನಿತ್ಯವೃತ್ತಿಯಾಗಿ ಹೂ–ತೋಟಗಾರಿಕೆಯನ್ನು ಮತ್ತು ಹೂ–ಹಾರ ನಿರ್ಮಾಣ ಕೈಂಕರ್ಯವನ್ನು ಕೈಗೊಂಡಿದ್ದು; ಭಗವಂತನ ಸೇವೆಯಲ್ಲಿ ತೊಡಗಿದ್ದರು.

**ಇಂತಹ ಹಾದಿಯಲ್ಲೇ ಅನೇಕ ಶಾತ್ತಾದ ಶ್ರೀವೈಷ್ಣವರು ತೊಡಗಿದ್ದುದು ಅತ್ಯಂತ ಗಮನಾರ್ಹ ವಿಷಯವಾಗಿದೆ.**

---

1, 2, 3, 4:—"Life of Sri Ramanuja" by Ramakrishnananda, Ramakrishna Math, Mylapore, Madras; 1959. ರಿಂದ ಉದಹರಿಸಲ್ಪಟ್ಟಿದೆ.

1. ಪುಟ 20 Periyalwar one day went to his own ತುಲಸಿ grove to gather leaves for the worship of ಶ್ರಿ ವಿಷ್ಣು.

2. ಪುಟ 23 One day when after plucking flowers from his own garden Tondara Adi Pudi Alwar, was busy making a garland out of them.

3. ಪುಟ 15 The only occupation of this great one (Tirumalisai Alwar) was to pluck flowers and ತುಲಸಿ leaves and offer fascinating garlands made out of them to Govinda.

4. ಪುಟ 22 "ಗೋದ" in ಸಂಸ್ಕೃತ may mean the giver of sweet hymns, one who was given by earth; or the giver of garlands.

## Sl. No. 211 (No. 26 G.T.)

[On the west wall in the first ಪ್ರಾಕಾರ of ಶ್ರೀ ಗೋವಿಂದರಾಜಸ್ವಾಮಿ Temple at ತಿರುಪತಿ].

ಮೂಲ ತಮಿಳಿನಲ್ಲಿದೆ:-

(1) "I HAIL! May it be prosperous! on (2) ಶುಕ್ರವಾರಂ the day of ಉತ್ತಿರತ್ತಾದಿ (ಉತ್ತರಾಭಾದ್ರ ನಕ್ಷತ್ರ), being the 6th lunar day of the dark half of the ಕರ್ಕಾಟಕ month in the ದುಂದುಭಿ year, corresponding to the illustrious ಶಕ year 1364; the ಸ್ಥಾನತ್ತಾರ್ of ತಿರುಮಲ registered this record on stone in favour of **ಕರುಣಾಕರ ದಾಸರ್**, one of the **ಶಾತ್ತಾದ ಶ್ರೀ ವೈಷ್ಣ (ವಾಸ್) ವರ್ಗಳ್** of ತಿರುಪತಿ".

"For the purpose of providing, out of the interest on capital, from the ಶ್ರೀ-ಭಂಡಾರಂ, one ತಿರುಪ್ಪೊನಾಕಂ each day in his name from this day forward for ಶ್ರೀ ಗೋವಿಂದಪ್ಪೆರುಮಾಳ್ in ತಿರುಪತಿ, the sum entrusted with the ಶ್ರೀ ಭಂಡಾರಂ this day is 100 ಪೊನ್. As a charge on the interest on this (sum of) 100 ಪೊನ್ shall be supplied from the ಶ್ರೀ ಭಂಡಾರಂ for the (stipulated) one ತಿರುಪ್ಪೊನಾಕಂ each day (commencing) from the 1st day of

---

1. Tirupati Devastanam Inscriptions. Vol. I. P. 212-213.

2. 29—6—1442 A.D.

ಆಡಿ month, till the lasting of the moon and the sun".

"......................Out of the offered ಪ್ರಸಾದಂ, he shall receive a quarter share being one ನಾಳಿ; and likewise it shall continue throughout the succession of his descendants and shall be effective as long as the moon and the sun endure".

"This is written with the permission of the ಶ್ರೀ ವೈಷ್ಣವರ್‌ಗಳ್ (ವಾಸ್) by the temple accountant ತಿರುನಿನ್ರ–ಊರ್–ಉಡ್ಡೈಯಾನ್. May (this) the ಶ್ರೀ ವೈಷ್ಣವಾಸ್ protect !"

ಹೀಗೆ ತಮ್ಮ ಹೆಸರಿಗೆ ಅನ್ವರ್ಥವಾಗಿ ಬಾಳಿದ ಕರುಣಾಕರದಾಸರು ಸೇವಾಶ್ರೀಯನ್ನು ಮೈದಾಳಿಸಿಕೊಂಡು ಶಿಲಾಶಾಸನಸ್ಥರಾಗಿದ್ದಾರೆ. ಅವರ ಸೇವೆ ಸೂರ್ಯ ಚಂದ್ರರು ಇರುವವರೆಗೆ ನಡೆಯಲಿ ಎಂದು ಹಾರೈಸಿದ ಈ ಶಾಸನ, ಭಕ್ತ–ಬಳಗಕ್ಕೆ ನಿತ್ಯ ಬೆಳಕೀಯುವ ನಂದಾದೀವಿಗೆಯಂತಿದೆ!

## Sl. No. 21 (1) (No. 277 T.T.)

[On the west wall of the second ಪ್ರಾಕಾರ of ತಿರುಮಲೈ Temple].

ಕೌಂಡಿನ್ಯ ಗೋತ್ರದ, ಆಪಸ್ಥಂಬ ಸೂತ್ರದ ರಾಚಿ ರಾಜರ ಪುತ್ರ ರಾದ (2) ಪ್ರಧಾನಿ ಸಾಳುವ ತಿಮ್ಮರಸಯ್ಯರ್ (ತಿಮ್ಮರಸಯ್ಯನವರು

1. T D. Inscriptions Vol. III P.P. 92—96.

2. ಸಾಳುವ ತಿಮ್ಮರಸರು, ಕೃಷ್ಣರಾಯರ ಪ್ರಧಾನ ಅಮಾತ್ಯರೂ, ಸರ್ವೋಚ್ಚ ಸೇನಾಪತಿಗಳು. ಗಜಪತಿಯ ಮೇಲೆ ಗೆದ್ದ ವಿಜಯದಲ್ಲಿ ಇವರ ಪಾತ್ರ ಬಹು ಪ್ರಾಮುಖ್ಯವಾಗಿತ್ತು. ಇವರು ವಿದ್ವಾಂಸರೂ ಹೌದು.—ಸಂಪಾದಕ.

ಎನ್ನುವ ಅರ್ಥದಲ್ಲಿ) ಕ್ರಿ.ಶ. 13–1–1512ರಲ್ಲಿ ಬರೆಯಿಸಿದ ಬಹು ದೊಡ್ಡ ಶಾಸನವೊಂದಿದೆ. ತಿರು ವೆಂಕಟೇಶ್ವರನ ಕೈಂಕರ್ಯಕ್ಕೆ ಪೊಟ್ಟಪ್ಪಿನಾಡಿನ ಪರಾಂತಲೂರ್ ಗ್ರಾಮವನ್ನು ದತ್ತಿಯಾಗಿ ನೀಡಿದ್ದರು. ಇದರ ಉತ್ಪತ್ತಿ ಯಿಂದ ಇಂತಿಂತಹ ಸೇವೆ ನಡೆಯಬೇಕೆಂದೂ, ಇಂತಿಂತಹವರಿಗೆ ಪ್ರಸಾದದ ವಿನಿಯೋಗ ಆಗಬೇಕೆಂದು ಉಲ್ಲೇಖವಿದೆ. ಈ ಶಾಸನದ 13–14ನೇ ಪ್ಯಾರಾ ಇಂತಿದೆ:—

"ಸಿಂಗಯ್ಯನ್, one of the **ಶಾತ್ತಾದ ಶ್ರೀ ವೈಷ್ಣ**(ವಾಸ್) **ವರ್‌ಗಳ್** cultivating your flower garden, shall be entitled to receive one ಪ್ರಸಾದಂ daily, from the 1/4th ಪ್ರಸಾದಂ, forming the Doner's share; out of the entire offered ಪ್ರಸಾದಂ"; etc.

ಸಿಂಗಯ್ಯನವರು–ಪ್ರಧಾನಿ ತಿಮ್ಮರಸಯ್ಯನವರು ದತ್ತಿಯಿತ್ತ ಗ್ರಾಮದ ನಂದವನದ–ಕೆಲಸ ನಿರ್ವಹಿಸುತ್ತಿದ್ದರೆಂದೂ, ಅದಕ್ಕಾಗಿ ಕರ್ತೃಗಳ ಭಾಗಕ್ಕೆ ಪ್ರತಿನಿತ್ಯ ಬರುತ್ತಿದ್ದ 1/4 ಭಾಗ ಪ್ರಸಾದದಲ್ಲಿ, ಒಂದು ಪ್ರಸಾದವು **ಶಾತ್ತಾದ ಶ್ರೀ ವೈಷ್ಣವರಾದ ಸಿಂಗಯ್ಯ**ನವರಿಗೆ ಸಲ್ಲತಕ್ಕದ್ದೆಂದು, ಶಾಸನವು ತಿಳಿಸುತ್ತದೆ. ಮಹಾ ಪ್ರಧಾನಿಯೂ, ಮಹಾ ದಂಡನಾಯಕರೂ ಆದ ತಿಮ್ಮರಸಯ್ಯನವರ ಪ್ರಸಾದದ ಭಾಗದಲ್ಲಿ, ಸಿಂಗಯ್ಯನವರು ಪಾಲು ಪಡೆ ಯುವಷ್ಟು ಗೌರವಾನ್ವಿತ ವ್ಯಕ್ತಿಯಾಗಿದ್ದರೆಂದು; ಇದರಿಂದ ನಿರ್ಧರಿಸ ಬಹುದು.

**ಅನುಕ್ರಮ ಸಂಖ್ಯೆ** 27 (ನಂ. 288 **G.T.**) **[on the South wall (outer side east of entrance) of ಮಧುರಕವಿ ಆಳ್ವಾರ್ (ಸ್) ಗಳ್ shrine in the Temple of ಶ್ರೀ ಗೋವಿಂದರಾಜ ಸ್ವಾಮಿ in ತಿರುಪತಿ].**

(1) ಈ ದೊಡ್ಡ ಶಾಸನವು ಕ್ರಿ. ಶ. 7–8–1512ರಲ್ಲಿ ಯಲ್ಲಪ್ಪನಾಯಕರ್‌ರವರ ಪುತ್ರರಾದ ತಿರುಮಲೈನಾಯಕ್ಕರು, "ಪಾರಿಟ್ಟೈಪ್ಪುತ್ತೂರ್" ಗ್ರಾಮವನ್ನು ಇತ್ತ ದತ್ತಿಯನ್ನು ಕುರಿತುದಾಗಿದೆ. ಇದರಂತೆ ಗೋವಿಂದರಾಜ ಸ್ವಾಮಿಯವರಿಗೂ, ನಾಚ್ಚಿಯಾರ್ ಸ್ವಾಮಿನಿಯವರಿಗೂ ನಡೆಯಬೇಕಾದ ನಿತ್ಯ ಸೇವೆಯ ವಿವಿಧ ವಿವರ ಇದೆ. ಪ್ರಸಾದದ ವಿನಿಯೋಗವು ಈ ರೀತಿಯೇ ನಡೆಯಲೆಂದು ವಿವರವಾದ ಕಟ್ಟಳೆ ಇದೆ. ಅದರಲ್ಲಿ ಮೊದಲು ಕುಮಾರ ತಾತಯ್ಯಂಗಾರ್, ವಿನ್ನಪ್ಪನ್ ಶೇಯ್ವರ್........, ನೋಟ್ಟಕ್ಕರಾರ್,........ ಗ್ರಾಮಾಧಿಕಾರಿ, ಪಾಪವಿನಾಶಂ ಅಯ್ಯನವರು, ವಾದಕೇಸರಿ ಅಥವ ಅಪ್ಪಚ್ಚಿಯಾರ್ ಅಣ್ಣ, ದೇವಸ್ಥಾನದ ಲೆಕ್ಕಿಗರು (ಲೆಕ್ಕ-ಪತ್ರ ಬರೆಯುವವರು) ತಿರುಪತಿಯ ಶ್ರೀನಿವಾಸಪುರ ಬಡಾವಣೆ ಮತ್ತು ಕುಲಶೇಖರ ಬೀದಿಯಲ್ಲಿ ವಾಸವಾಗಿರುವ ಮಹಾಜನಗಳು (Village Assembly) ನಂತರ ಶಾತ್ತಾದರು (ದಾಸನಂಬಿಗಳು), ತಿರಚ್ಚುಕ್ಕನೂರ್ ನಂಬಿಮಾರರು ನಂತರ ಕಮ್ಮಾರರು, ಕುಂಬಾರರು, ಸೌದೆ ಸರಬರಾಜು ಮಾಡುವವರು ದೇವಸ್ಥಾನದ ಶಾಲೆಯ ಕೆಲಸಗಾರರು, ಗರಿಬುಟ್ಟಿ, ಬೀಸಣಿಗೆ ಒದಗಿಸುವವರು ಇತ್ಯಾದಿ ಅನೇಕ ಸೇವಾಕರ್ತರಿಗೆ . ವಿನಿಯೋಗಿಸಬೇಕೆಂದು ಸ್ಪಷ್ಟ ಉಲ್ಲೇಖವಿದೆ.

ಈ ಶಾಸನವೂ ಆಚಂದ್ರಾರ್ಕವಾಗಿರಲೆಂದು ಇದೆ.

## ಅನುಕ್ರಮ ಸಂಖ್ಯೆ 97 (ನಂ. 32 T.T.) [On the north wall of the ಪ್ರಥಮ ಪ್ರಾಕಾರಂ in ತಿರುಮಲೈ Temple]

(2) ಈ ಶಾಸನವು ಕ್ರಿ.ಶ. 17–8–1514ರಲ್ಲಿ ವೇದಾಂತಾಚಾರ್ಯರೆಂದು ಬಿರುದು ಪಡೆದ, ಪ್ರತಿವಾದಿ ಭಯಂಕರಾರ್ ಅಣ್ಣನವರ ಕುಮಾರರಾದ ಅಪ್ಪಯ್ಯಂಗಾರ್‌ರವರ ಶಿಷ್ಯರಾದ, ಏಕಾಕಿ ತಿರುವೆಂಕಟಯ್ಯನ್‌ರವರ ಸೇವೆಯ ಪರವಾದ ಶಾಸನವಾಗಿದೆ. ಈ ಏಕಾಕಿ ಶ್ರೀ ವೈಷ್ಣವರು, "ತಿರುವಾಳಿ

---

1. T. D. Inscriptions—Vol. III P P. 103—108.
2. T.D. Inscriptions Vol. III P.P. 198—200.

4343

ಪರಾಪ್ಪಿನಾನ್–ನಂದವನ"ದ ವ್ಯವಸ್ಥಾಪಕರೆಂದು ಉಲ್ಲೇಖವಿದೆ. ಇವರು "ತಿರುಪ್ಪು–ಮಂಟಪ"ವನ್ನು ನಿರ್ಮಿಸಿದ್ದರೆಂದು, ಅಲ್ಲಿಗೆ ಮಲ್ಯೆ ಕುನಿಯಾನಿನ್ರ ಪೆರುಮಾಳ್ (ಶ್ರೀ ವೆಂಕಟೇಶ್ವರರ ಉತ್ಸವ ಮೂರ್ತಿ) ರವರು ದಯಮಾಡಿಸುತ್ತಿದ್ದರೆಂದು ತಿಳಿದುಬರುತ್ತದೆ. ಇವರು ಈ ಕೈಂಕರ್ಯಕ್ಕೆ 240 ನಾರ್‌ಪಣಂ ಸಲ್ಲಿಸಿದ್ದರೆಂದು ಉಲ್ಲೇಖವಿದೆ.

ಅಂದಿನ ದಿನಗಳಲ್ಲಿ ಹೂ–ತೋಟ ನಿರ್ಮಾಪಕರಾಗಿ, ನಿರ್ವಾಹಕರಾಗಿ ಇರುತ್ತಿದ್ದವರು ಶಾತ್ತಾದ ಶ್ರೀ ವೈಷ್ಣವರು. ಆದರೂ ಇವರು ಶಾತ್ತಾದರೇ ಅಥವ ಬೇರೆಯವರೇ ಎನ್ನುವುದರ ಬಗೆಗೆ ಸಂಶೋಧನೆ ಅಗತ್ಯ.

[(2) ತಿರುಪತಿ ಶಾಸನದ ನಂ. 562ರಲ್ಲಿ ರಾಮಾನುಜಯ್ಯನ್ ಬೀದಿಯಲ್ಲಿ ವಾಸಿಸುತ್ತಿರುವ, ತಿಮ್ಮಯ್ಯನ್‌ರವರ ಪುತ್ರ, ತಿರುತ್ತಣಿ ಅಪ್ಪಯ್ಯನ್‌ರವರು, ನಂದವನ ಮಾಡುವ **ಶಾತ್ತಾದ ಶ್ರೀ ವೈಷ್ಣವ**ರೆಂದು ತಿಳಿದು ಬಂದಿದೆ.

(3) ಆದರೆ, ಅದೇ ರೀತಿ G.T. ಶಾಸನದ 157ರಂತೆ ಪೇರಾರು ಲಾಲನ್ ತೋಟದ ವ್ಯವಸ್ಥಾಪಕರಾದ ತಿರು ವೆಂಕಟ ಜೀಯರ್‌ರವರೂ ಶಾತ್ತಾವರೇ ಎಂಬುದನ್ನು ಪರಿಶೀಲಿಸುವುದು ಅಗತ್ಯ—ಸಂಪಾದಕ].

**ಅನುಕ್ರಮ ಸಂಖ್ಯೆ 112 (ನಂ. 148 G.T.) [On the east base (outer side) right of entrance of the ಗೋಪುರಂ in the Temple of ಶ್ರೀ ಗೋವಿಂದರಾಜ ಸ್ವಾಮಿ in ತಿರುಪತಿ.]**

---

2. T.D. Inscriptions Vol. IV P.P. 277—280.
3. T.D. Inscriptions Vol. IV P.P. 253—255.

4343

"(1) Prosperity ! Hail ! On the (2) day of the star ಚಿತ್ತಿರೈ, combined with Thursday, the 10th Lunar day of the bright fortnight of the ವೃಷಭ month, in the cyclic year ಭಾವ, corresponding to the ಶಕ year 1436, ಯತಿರಾಜ ಜೀಯರ್, the manager of the ನಮ್ಮಾಳ್ವಾ(ರ್ಸ್)ರ್‌ಗಳ್ Temple in Tirupati, executed **the following ಶಿಲಾಶಾಸನಂ in favour of ಪಟ್ಟರ್ ಪಿರಾನ್–ಅಯ್ಯನ್ one of the ಶಾತ್ತಾದ–ಏಕಾಕಿ–ಶ್ರೀ ವೈಷ್ಣವರ್‌ಗಳ್ and a disciple of ಪರವಸ್ತು ಅಣ್ಣ, viz.,".** ಈ ರೀತಿ ಶಾಸನ ಪ್ರಾರಂಭವಾಗಿ ಮುಂದುವರೆದಿದೆ.

ಈ ಶಾಸನದಂತೆ ಈ **ಶಾತ್ತಾದ ಶ್ರೀ ವೈಷ್ಣವರು** ಶ್ರೀಭಂಡಾರಕ್ಕೆ 150 ನಾರ್‌ಪಣಂ ಸಲ್ಲಿಸಿದ್ದರೆಂದು, **ನಮ್ಮಾಳ್ವಾರ್‌ರವರಿಗೆ ಕನ್ನನಿಂ ಶಿರುತ್ತಾಂಬು ಶಿರುಪ್ಪು ಅಧ್ಯಯನೋತ್ಸವವನ್ನು ನಡೆಯಿಸುವುದು,** ಇಲಾಮುಂಡಿಯಂ ಗ್ರಾಮದಲ್ಲಿರುವ ನಮ್ಮಾಳ್ವಾರ್ ಪಟ್ಟಡಿ ದತ್ತಿ ಭೂಮಿಯ ಕಾಲುವೆಯ ದುರಸ್ತಿ ಖರ್ಚು, ಇತರೆ ವಿವಿಧ ನೈವೇದ್ಯ (ನಿವೇದಿಸುವುದು–ನೈವೇದ್ಯ) ಸಲ್ಲಿಸುವಿಕೆ, ಪ್ರಬಂಧಗಳನ್ನು (ದ್ರವಿಡ ವೇದ) ಹೇಳುವವರಿಗೆ ಪ್ರಸಾದ ವಿನಿಯೋಗ ಇತ್ಯಾದಿ ಉಲ್ಲೇಖವಿದೆ. ಈ ಶಾಸನವು ಅಲ್ಲಿನ ಶ್ರೀ ವೈಷ್ಣವರ ಒಪ್ಪಿಗೆಯಿಂದ ನಿರೂಪಿಸಲ್ಪಟ್ಟಿದೆ ಎಂದಿದೆ. ಆದರೆ ಇಲ್ಲಿ ಆಚಂದ್ರಾರ್ಕಪರ್ಯಂತ ಇರಲೆಂದು ಹೇಳುವ ಸಂಪ್ರದಾಯ ಶೂನ್ಯವಾಗಿದೆ.

(3) ಮೇಲೆ ಕಂಡ ಶಾಸನದ ರೀತಿಯಲ್ಲೇ ಅನುಕ್ರಮ ಸಂಖ್ಯೆ 156 ಗೋವಿಂದರಾಜ ಮಂದಿರದ 204ನೇ ನಂಬರು ಶಾಸನವು 21–9–1523 ರಲ್ಲಿ ಶಾಸನ ರೂಪದಲ್ಲಿ ಇಳಿದಿದೆ. ಇದೊಂದು ದೊಡ್ಡ ಶಾಸನ.

---

1. T.D. Inscriptions Vol. III P.P. 208-209.
2. ಕ್ರಿ.ಶ. 4-5-1514ಕ್ಕೆ ಸರಿಸಮಾನವಾದ ದಿನ.
3. T.D. Inscriptions Vol. III P.P. 324-326.

"This is the ಶಿಲಾಶಾಸನಂ executed by the ಕರ್ತಾರ (Agent) of ತಿರುಪತಿ ನಮ್ಮಾಳ್ವಾರ್‌ಗಳ್ (ಸ್) shrine and the manager of ಉಡಯವರ್ ಎಂಬರುಮಾನಾರ್ shrine in favour of ಪಟ್ಟರ್ ಪಿರಾನ್ ಅಯ್ಯನ್, one of the **ಏಕಾಕಿ ಶ್ರೀ ವೈಷ್ಣವರ್‌ಗಳ್** and a disciple of ಪರವಸ್ತು ಅಣ್ಣ to wit etc." ಎಂದಿದೆ.

ಈ ದತ್ತಿ ಸೇವೆಯು ನಮ್ಮಾಳ್ವಾರರ ಕೈಂಕರ್ಯದಲ್ಲಿ ಅರ್ಪಿತವಾಗಿದೆ. ಈ ಶಾಸನವು–on the west wall of the left side of the entrance of ಶ್ರೀ ನಮ್ಮಾಳ್ವಾ(ರ್ಸ್)ರ್ ರವರ shrine at ಕಪಿಲ ತೀರ್ಥಂ north of ತಿರುಪತಿ—ನಲ್ಲಿದೆ.

---

Tirupati Devastanam inscriptions, Vol. III, page 208-210ರಲ್ಲಿ ಕ್ರಮಾಂಕ ಶಾಸನದ ನಂಬರು 112, ಗೋವಿಂದ ರಾಜಸ್ವಾಮಿ ಮಂದಿರದ ಶಾಸನದ ನಂಬರು 148, ಮತ್ತು ಇದು ಶಾಸನಸ್ಥ ವಾದ ದಿನ 4–5–1514 (ಕ್ರಿ.ಶ) ಎಂದು ನಮೂದಾಗಿದೆ. ಆದರೆ ಇದೇ ಶಾಸನವನ್ನು Index ನಲ್ಲಿ (ಇದೇ ಸಂಪುಟದಲ್ಲಿ) ತೋರಿಸುವಾಗ ಪುಟ XVIIIನಲ್ಲಿ ಅನುಕ್ರಮ ಸಂಖ್ಯೆ 208ನೇ ಶಾಸನವು Serial and proper Nos. of inscriptions ಕಾಲಂನಲ್ಲಿ 102 (No. 203 G.T.) ಶಕ 1436 (4–5–1514) ಎಂದು ನಮೂದಾಗಿದೆ. ಈ ಶಾಸನವು G.T. 148 ಇರಬೇಕು; ಇಲ್ಲವೇ G.T. 203 ಇರಬೇಕು. ಅಲ್ಲದೆ T.D.E. Glossary ಪುಟ 265ರಲ್ಲಿ ಪಟ್ಟರ್ ಪಿರಾನ್ ಅಯ್ಯನ್ ಎಂಬ ಶಾತ್ತಾದ ಶ್ರೀ ವೈಷ್ಣವರ ಬಗೆಗೆ ವಿವರಣೆ ಕೊಡುತ್ತಾ, ಮೂರನೇ ಸಂಪುಟದ ಶಾಸನ ನಂಬರು 102 ನೋಡು—ಎಂದು ಹೇಳಲಾಗಿದೆ. ಇದ ರಲ್ಲಿ ಯಾವುದು ಮುದ್ರಣ ದೋಷ ಎಂಬುದನ್ನು ಪರಿಶೀಲಿಸಬೇಕಾಗಿದೆ.

—ಸಂಪಾದಕ.

G.T 148ನೇ ಶಾಸನವು 4-5-1514 (ಕ್ರಿ.ಶ.)ರಲ್ಲಿ ರೂಪಿತವಾಗಿದ್ದರೆ, G.T. 204ನೇ ಶಾಸನವು 21-9-1523 (ಕ್ರಿ.ಶ.) ನಲ್ಲಿ ಅಂದರೆ ಒಂಬತ್ತು ವರುಷಗಳ ನಂತರ ರಚಿತವಾಗಿದೆ. ಈ ಎರಡನೇ ಶಾಸನದಲ್ಲಿ ಹೇಳಿರುವ ಏಕಾಕಿ ಶ್ರೀ ವೈಷ್ಣವರಾದ ಪಟ್ಟರ್ ಪಿರಾನ್ ಅಯ್ಯನ್‌ರವರು (ಪಟ್ಟರ್=ಭಟ್ಟರು, ಪಿರಾನ್=ಹಿರಿಯ, ಅಯ್ಯನ್=ಅಯ್ಯನವರು; "ಹಿರಿಯ ಭಟ್ಟರಯ್ಯ"ನವರು ಎಂದು ಕನ್ನಡಾನುವಾದ ಮಾಡಬಹುದು.) ಮೊದಲನೇ ಶಾಸನದಂತೆಯೇ ಪರವಸ್ತು ಅಣ್ಣನವರ ಶಿಷ್ಯರಾದುದರಿಂದ, ಇವರೂ ಸಹ ಮೊದಲನೇ ಶಾಸನದ **ಕರ್ತೃ** (148 G.T.) ಗಳೇ ಆಗಿರಬಹುದೆಂದು ಮತ್ತು ಇವರೂ ಶಾತ್ತಾದ ಶ್ರೀ ವೈಷ್ಣವರೆಂದು ನಿರ್ಧರಿಸಬಹುದಾಗಿದೆ. ಇದೇ ವಿಷಯವನ್ನು 123ನೇ ತಃಖ್ತೆಯಲ್ಲಿ ವಿವರಿಸಿದ ವಂಶಾವಳಿ (Genealogy) ಯೂ ಸಹ ದೃಢೀಕರಿಸುತ್ತದೆ. (ವಿವರಕ್ಕೆ T.D.E. Glossary—P. 78 ನೋಡಿ.)

**ಶಾತ್ತಾದ ಶ್ರೀ ವೈಷ್ಣವ ಭಕ್ತರು,** ಹೀಗೆ ತಿರುಪತಿಯ ಗೋವಿಂದರಾಜನ, ತಿರುಮಲೈನ ಶ್ರೀನಿವಾಸನ, ಮತ್ತು ಆಳ್ವಾರರ ಹಾಗೂ ಆಚಾರ್ಯರ ಸೇವೆಯಲ್ಲಿ ವಿವಿಧ ಮುಖಗಳಲ್ಲಿ ಸೇವೆ ಸಲ್ಲಿಸುತ್ತಾ; ಭಾವಿ ಪೀಳಿಗೆಗೆ ಸ್ಫೂರ್ತಿಯಾಗಿಯೂ ಬೆಳಕಾಗಿಯೂ, ಇದ್ದರೆಂದು ಭಾವಿಸಬಹುದು.

# ಅಧ್ಯಾಯ ೪

# ಕೀರ್ತಿಯ ಕಲ್ಪತರು

"ಸತ್ಯ ಮತ್ತು ಪ್ರೇಮಗಳು (ಅಹಿಂಸೆ) ಒಂದೇ ನಾಣ್ಯದ ಎರಡು ಮುಖಗಳಾಗಿರುವಂತೆ", **ಸೇವೆ ಮತ್ತು ನಮ್ರತೆಯ ಪ್ರತೀಕವಾಗಿ ಕಂದಾಡೈ ರಾಮಾನುಜಯ್ಯಂಗಾರ್‌ರವರು ಇದ್ದರು ಎಂದರೆ; ಸತ್ಯ ಬಿಂದುವಿನಿಂದ ಬಹುದೂರ ಹೋದಂತಾಗುವುದಿಲ್ಲ.** ಅಂತಹ ಅನ್ವರ್ಥ ಹೆಸರು ಅವರದು. ಅವತಾರಿ ಪುರುಷ **ಭಗವಾನ್ ರಾಮನ** ಅನುಜನ

ಹೆಸರನ್ನೇ ಇವರಿಗೆ ಇಟ್ಟ ತಂದೆ ತಾಯಿಗಳ ಅಭೀಷ್ಟವನ್ನು ಪರಿಪೂರ್ಣಗೊಳಿಸಿದ ಸೇವಾದುರಂಧರ, ಈತ. ಅಗ್ರಜ ರಾಮನಿಗೆ ಆ ಅನುಜನಾದ ಲಕ್ಷ್ಮಣನು ಸೇವೆಗೈದಂತೆ, ಈ ರಾಮನ ಅನುಜನು (ಕಂದಾಡೈ ರಾಮಾನುಜಯ್ಯಂಗಾರ್) ಆಚಾರ್ಯಾವತಾರಿ ತಿರುಮಲೆಯ ಶ್ರೀನಿವಾಸನ ಸೇವೆಯನ್ನು, ಮನಸಾರೆ ಮಾಡಿದ ಮಹಾನ್ ವ್ಯಕ್ತಿ.

ಈತ, ವಿಜಯನಗರದ ದೊರೆ ಸಾಳುವ ನರಸಿಂಹರಾಯನ ಸಮಕಾಲೀನ. ಅಲ್ಲದೆ ಅವರಿಗೆ **ಆಚಾರ್ಯ ಪುರುಷ.** ಹದಿನೈದನೇ ಶತಮಾನದಲ್ಲಿ ತಿರುಪತಿಯ ಕೋರಮಣಿಯಾಗಿ ಬೆಳಗಿದ ಭವ್ಯ ಜೀವಿ; ಭಾವುಕ ಭಕ್ತ.

ಕಂದಾಡೈ ರಾಮಾನುಜಯ್ಯಂಗಾರ್‌ರವರು ಕ್ರಿ.ಶ. 1430 ರಿಂದ 1496ರ ವರೆಗೆ ಇದ್ದು, 66 ವಸಂತಗಳನ್ನು ಕಂಡು; ಭಗವಂತನ ಪಾದಸೇವೆ ಮಾಡಿ **ಆತನ** ಪಾದಪದ್ಮದಲ್ಲಿಯೇ ಬಂಡುಣುವ ದುಂಬಿಯಂತೆ ಅಡಗಿ ಹೋದರೆ; ಇವರ ಶಿಷ್ಯನಾದ ಸಾಳುವ ರಾಯನು ಕ್ರಿ.ಶ. 1445ರಲ್ಲಿ ಜನಿಸಿ 1504ರಲ್ಲಿ ತನ್ನ 59ನೇ ವಯಸ್ಸಿನಲ್ಲಿ ತನ್ನ ಬಾಳ ಪಯಣವನ್ನು ಮುಗಿಸಿ ಪರಲೋಕಕ್ಕೆ ಪದಾರ್ಪಣೆ ಮಾಡುತ್ತಾನೆ. ವಯಸ್ಸಿನಲ್ಲಿ ರಾಯನು ಆಚಾರ್ಯ ಪುರುಷರಿಗಿಂತ 15 ವರುಷ ಕಿರಿಯ. ಆದರೂ ಈ ರಾಯನು ತನಗಿಂತ 8 ವರುಷ ಮುಂಚೆಯೇ, ಅಂದರೆ ತನ್ನ 51ನೇ ವಯಸ್ಸಿನಲ್ಲಿ ತನ್ನ ಹೃದಯಾಚಾರ್ಯರಾದ ಕಂದಾಡೈ ರಾಮಾನುಜಯ್ಯಂಗಾರ್‌ರವರು ವೈಕುಂಠವಾಸಿಗಳಾದುದನ್ನು ಕಾಣಬೇಕಾಯಿತು. ಅಂತೂ ಆಚಾರ್ಯರ ಪಾಲಿಗೆ ಮೃತ್ಯುವು ಕುತ್ತಾಗಿ ಬಾರದೆ, ಮಿತ್ರನಾಗಿಯೇ ಬಂದಿದ್ದನ್ನು ನೋಡುವ ಸೌಭಾಗ್ಯವಾದರೂ ರಾಜನ ಪಾಲಿಗೆ ಬಂದಿತ್ತು. ಆದರೆ ಕೊನೆಯ 8 ವರುಷಗಳ ಕಾಲ ಅವರ ಆಶೀರ್ವಾದವನ್ನು ಕಳೆದುಕೊಳ್ಳುವ ದೌರ್ಭಾಗ್ಯ, ರಾಯರ ಪಾಲಿಗೆ ಏಕಕಾಲದಲ್ಲಿ ಬಂದಿತ್ತು. ರಾಯರ ಜೀವನದಲ್ಲಿ ಸುಖ ದುಃಖಗಳು, ನೋವು ನಲಿವುಗಳು, ಸೌಭಾಗ್ಯ ದೌರ್ಭಾಗ್ಯಗಳು ಮಿಲನವಾಗುವ ರಸ ನಿಮಿಷಗಳ ಸಂಖ್ಯೆಯಿಂದ ಕೂಡಿತ್ತು.

ಅತ್ತ (1) ಅಹೋಬಿಲ ಮಠದ ಸಂಸ್ಥಾಪಕರಾದ ಆದಿವಾನ್ ಶಠಕೋಪಜೀಯರ್ (ಕ್ರಿ.ಶ. 1437–1516) ರವರು; ಇತ್ತ ಕಂದಾಡೈ ರಾಮಾನುಜಯ್ಯಂಗಾರ್‌ರವರು ಹದಿನೈದನೇ ಶತಮಾನದ ದಿಗ್ಗಜಗಳು; ಸಾರಸ್ವತವಾದ ಸೇವಾ ಕ್ಷೇತ್ರದಲ್ಲಿನ ಅಸದೃಶ ಮುತ್ತಿನಂತೆ ತಿರುಪತಿಯ ಆಕಾಶದಲ್ಲಿ ವಿರಾಜಿಸುತ್ತಿದ್ದರೆಂದರೆ, ಹೊಗಳಿಕೆಯ ಹೂ ಎರಚಿದಂತಾಗುವುದಿಲ್ಲ.

ಈಗ ಮುಖ್ಯವಾಗಿ ಕಂದಾಡೈ ರಾಮಾನುಜಯ್ಯಂಗಾರ್‌ರವರ ಬಗೆಗೆ ಕೆಲವಾದರೂ ಮುಖ್ಯ ಶಾಸನಗಳನ್ನು ಸಾಂಗೋಪಾಂಗವಾಗಿ ಅಭ್ಯಸಿಸುವುದು ಅಗತ್ಯ. ರಾಮಾನುಜ ಕೂಟದ ಜನಕ ಮತ್ತು ಅದರ ಬೆಳವಣಿಗೆಗಾಗಿ ಅಹರ್ನಿಶಿ ದುಡಿದ ಏಕಮಾತ್ರ ಭಕ್ತ ಪುಂಗವನ ಸ್ಮರಣೆಯು, ಓದುಗರಿಗೆ ಪಾವನ ಪ್ರಸಂಗವಾಗುವುದು.

---

1. ಆದಿವಾನ್ ಶಠಕೋಪ ಜೀಯರ್ :—T.D.E. Glossary P. 57 Table No. 87ರಲ್ಲಿ :—

(ಅ) ಇವರ ಕಾಲವನ್ನು ಗ್ರಂಥ ಪರಂಪರೆ, ಸಮಾಶ್ರಯಣ ಪರಂಪರೆಯಂತೆ ಕ್ರಿ.ಶ. 1437ರಿಂದ 1516ರ ವರೆಗೆ (79 ವರುಷ) ಎಂದು ನಿರ್ಧರಿಸಲಾಗಿದೆ.

(ಆ) T.D.E. Glossary Page 58, Table No. 88ರಂತೆ:—This ವಾನ್ ಶಠಕೋಪ ಜೀಯರ್ was born in the reign of ದೇವರಾಯ II. He was the preceptor (ಗುರು) of ಅಲ್ಲಸಾನಿ ಪೆದ್ದನ್ನ, the famous poet laureate of ಕೃಷ್ಣರಾಯ—ಎಂದು ತಿಳಿಸುತ್ತದೆ. ಅಲ್ಲದೆ ಅದೇ ಟೇಬಲ್‌ನಲ್ಲಿ ಇವರ ಕಾಲವನ್ನು ಎರಡು ಆವರಣ ಹಾಕಿ (ಕ್ರಿ.ಶ. 1437-1516) ಅಥವ (ಕ್ರಿ.ಶ. 1456-1516) ಎಂದು ಉಲ್ಲೇಖಿಸಿದೆ.

(ಇ) T.D.E. Report Page 212ರಲ್ಲಿ :—

The ಸನ್ನಿಧಿ ಗುರುಪರಂಪರ a small work in ತಮಿಳು, dealing with the lives of the successive heads of the ಅಹೋಬಿಲ ಮಠಂ mentions that ವಾನ್—ಶಠಕೋಪ ಜೀಯರ್ was the son of ಕಿಡಾಂಬಿ ಕೇಶವಾಚಾರ್ಯ of ತಿರುನಾರಾಯಣಪುರಂ (ಮೈಸೂರು ರಾಜ್ಯದ ಮಂಡ್ಯ ಜಿಲ್ಲೆಯ ಮೇಲುಕೋಟೆ), having been born on Thursday the 5th lunar

## Sl. No. 24 (1) (No. 25 G.T.)

[On the west wall of the first ಪ್ರಾಕಾರ of ಶ್ರೀ ಗೋವಿಂದರಾಜ ಸ್ವಾಮಿ Temple in ತಿರುಪತಿ.]

1–3. "May there be prosperity! On Friday (9–1–1416 ಕ್ರಿ.ಶ.) combined with (the star) Sataiyam (ಶತಭಿಷಕ್) being the 3rd lunar day of the bright fortnight of the ಮಕರ month in the year ವ್ಯಯ current with the year 1388 of the ಶಕ year, the ಶಿಲಾಶಾಸನಂ was executed in favour of **ಕಂದಾಡೈ ರಾಮಾನುಜಯ್ಯಂಗಾರ್, the manger of ರಾಮಾನುಜ ಕೂಟಂ (ಸ್) established at ತಿರುಪತಿ** and the **disciple of ಅಳಗಿಯ ಮಣವಾಳ–ಜೀಯರ್**, by the (2) ಸ್ಥಾನತ್ತಾರ್ of ತಿರುಮಲ".

ಇತ್ಯಾದಿಯಾಗಿ ಶಾಸನವು ಮುಂದುವರೆದಿದೆ. ಈ ಶಾಸನದ ಅಡಿ ಟಿಪ್ಪಣಿ ನೋಡಿದರೆ ಈ ಶಾಸನದ ವೈಶಿಷ್ಟ್ಯ ಸ್ವಯಂ ವೇದ್ಯವಾಗುವುದು.

---

day of the bright half of the Solar month ಪುರುಟ್ಟಾಶಿ in cyclic year ಸಿದ್ಧಾರ್ಥಿ, current with the ಶಕ year 1301 and ಕಲಿ year 4480, and these details work-out to 18th August 1379 ಕ್ರಿ.ಶ. etc., ಎನ್ನುತ್ತದೆ. ಆದ್ದರಿಂದ ಅವರ ಜನನ ಕಾಲವಾದ ಕ್ರಿ.ಶ. 1379, 1437, 1456 ಇತ್ಯಾದಿ ಭಿನ್ನ ಭಿನ್ನ ಕಾಲದ ಬಗೆಗೆ ಸಂಶೋಧನೆ ಅಗತ್ಯವಾಗಿವೆ—ಸಂಪಾದಕ.

(1) T.D. Inscriptions Vol. II. P.P. 39—40.

(2) ಈ ಶಿಲಾಶಾಸನಗಳ ಸಂಪ್ರಟಿಪ ಸಂಪಾದಕರೇ ನೀಡಿರುವ ಅಡಿ ಟಿಪ್ಪಣಿಯ ಮೂಲವನ್ನು ನೋಡುವುದು ಅಗತ್ಯ. Generally the ಸ್ಥಾನತ್ತಾರ್ are stated in the inscription to execute the document in favour of the doner and hence the expression 'ಸ್ಥಾನತ್ತಾರ್ of ತಿರುಮಲ' preceeds the name of the doner, be he a chief

## Sl. No. 30 (No. 8 G.T.)

[On the north wall, outer face, of the Central Shrine of ಶ್ರೀ ಗೋವಿಂದರಾಜ ಸ್ವಾಮಿ Temple in ತಿರುಪತಿ.]

ಈ ಶಾಸನವು ತೆಲುಗು ಲಿಪಿಯಲ್ಲಿ, ಕನ್ನಡದ ನುಡಿಯಲ್ಲಿದೆ. ಅಂದಿನ ಭಾಷೆಯ ಪರಿಚಯ ಮಾಡಿಕೊಡಲು ಮೂಲ ಇದ್ದ ಹಾಗೆಯೇ ಕೊಡಲಾಗಿದೆ. ಆದರೆ ಅಲ್ಲಿನ ತೆಲುಗು ಲಿಪಿಗೆ ಬದಲಾಗಿ ಇಲ್ಲಿ ಕನ್ನಡದ ಲಿಪಿಯನ್ನು ಮಾತ್ರ ಬಳಸಿದೆ. ಚುಕ್ಕೆ ಹಾಕಿರುವೆಡೆ ಶಾಸನದ ಲಿಪಿ ನಶಿಸಿದೆ.

1"...............ಸ್ತುಸ್ವಸ್ತಿ ಶ್ರೀ ಶಕಾಬ್ದಂ 138 (9) ಮೇಲೆ ನಡೆವ (2) ಸರ್ವಜಿತು ಸಂವತ್ಸರದ ಪುಷ್ಪ ಶುದ್ಧ ೧ ಆ ಲು ಶ್ರೀಮನ್ಮಹಾಮಂಡಲೇಶ್ವರ ಮೇದಿನಿಮೀಸರಗಂಡ ಕಠಾರಿ ಸಾಲವ ನರಸಿಂಗಯ್ಯದೇವ— ಮಹಾರಾಯರುಗಳು ತಿರುಪತಿಯಸ್ಥಾನೀಕರಿಗೆ ಆಟದ...........ಗೋವಿಂದ ರಾಜದೇವರ ಪ್ರಸಾದ...............ತಿರುಮಲೆಯ ಮರಿಯಾದೆ ನಾವೆಲ್ಲರು ಹಂಚಿಕೊಂಡು ಜೀವಿಸಬೇಕೆಂದು............... ನಮಗೆ ಹಾಕಲಾಗಿ ನಾವು ಮಾವಾಪರವನು.

2...............ಳ ನಾಥ ದೇವರ ಮರಿಯಾದಯಲೆ ಗೋವಿಂದರಾಜ ದೇವರಿಗೆ ಉ (ಭ) ಯ ಭವನದಯಜರುಸಾಲ ಬಗೆಯುವರು ತಿರುಮಲೆಯ

---

spiritual teacher or a layman. But exception is made in the case of ಸಾಳುವ ನರಸಿಂಹ, his brother ತಿಮ್ಮರಾಜ and his ಗುರು ಕಂದಾಷ್ಟೆ ರಾಮಾನುಜಯ್ಯಂಗಾರ್ which indicates the honour they were shown, as well as the power and influence they wielded. Cf. Nos. 4, 17, 22, 25, 31, 34 and 50. ಇತ್ಯಾದಿಯನ್ನು ಮತ್ತೆ ಅವಲೋಕಿಸುವುದು ಅಗತ್ಯ.

1. T.D. Inscriptions Vol. II. P.P. 48—50.
2. 27-12-1467 (ಕ್ರಿ.ಶ.)ಕ್ಕೆ ಸಮನಾದ ತಾರೀಖು.

................ವಶ ಮಾಡಬೇಕು. ಗೋವಿಂದರಾಜ ದೇವರ ನಯಿವೇದ್ಯ ಪ್ರಸಾದವನೂ ತಿರುಪತಿಯವರಿಗೆ ಕಾಣಕರಾಗಿ ನಾವು ಹರಿವಾಣ............ ಆರೋಗಣೆಯ ಮಾಡುವ ಕಟಳೆಯ ಆರೋಗಣ ಹರಿವಾಣವಲೂ ಐದುಮಿಕ ಹರಿವಾಣಗಳನು ತಿರುಮಲೆಯ ಸಂಧಿ ಅಡಪಿನಲಿ ವಿಳಕ್ಕಾಡುನಲೂ ಹಂಚಿ ಕೊಂಬುದುನಾಗಿ ಗೋವಿಂದರಾಜದೇವರಿಗೆ ಮಕರ ಸಂಕ್ರಾಂತಿ................ ಕಾಲದಲೂ ನಂಮ................

3................(ನೈ) ವೇದ್ಯದ ಕಟಳೆಗೆ ಪಡವಿಡರಾಜ್ಯದ ಮುಪದು ವೆಟ ಮಾಂಗೊಡುವೆಲದ ಗ್ರಾಮುಗಳಲೂ ಅರಮನೆಗೆಯತ್ತಿ ಬಹುವಿಧ ಮಾಲವರಿಗಳನು ಬಿಟು ತಿರುಪತಿಯ ಕೆರೆಗೆ ಮಣನೂರು ಹೋದವನು ಕೊಟ್ಟು ಕಟಳೆಯನು ಮಾಡಿದ ನಯಿವೇದ್ಯಕ ಹರಿವಾಣ ಯಿಪತಾರು........ ಹರಿವಾಣ ವೊಂದು ತಿರುಕಣಾಮಡೆ ೧ ಕೆಯೆರಡರ ಲೆಖದಲೂ ದೇವರ ನಯಿವೇದ್ಯ ನಡವಹಾಗೆ ಕಟಳೆಯ ಮಾಡಿ ಹರಿವಾಣದ ಪ್ರಸಾವ ಪ್ರಸಾದದ– ಹರಿವಾಣಗಳ................ವಿಟ್ಟವನ್ ವಿಳುಕಾಡಿಗೆ ಹರಿವಾಣ ಆರುವರೆ ಅಪಪ್ರಸಾದ ಹದಿಮೂರು ಅಕಾಳಿಯ ಪ್ರಸಾದ................

4................ಧವನೂ ನಮಗೆದಮಿಪಿ ತಿರುಪತಿಯಲೂದಬಣ ತಿರುವಿ ಗೋವಿಂದರಾಜದೇವರ ಸಂನಿಧಿಯಲೋನಾಯಕದೇಸ್ತ ಶ್ರೀ ರಾಮಾ ನುಜಕೂಟದಲೂ ಪ್ರತಿದಿವಸಗಳಲೂ ಸ್ವದೇಶ ಪರದೇಶಗಳ ಶ್ರೀ ವಯಿಷ್ಣವರುಗಳಿಗೆ ................ ಮಾಡಿದರಾಗಿಯೀಪ್ರಸಾದವನೂ ಕಂದಾಳ ರಾಮಾನುಜಯ್ಯಗಳ ಶಿಷ್ಯಪಾರಂಪರಯಾಗಿ ನಂಮ ರಾಮಾನುಜಕೂಟಕೆ ನಡಸಿಬಹುದು ತಿರುಮಲೆಯ ಮೇಲೆ ನಾಉಕಟದ ರಾಮಾನುಜಕೂಟದಲೂ ತಿರುವೇಂಗಳನಾಥದೇವರ ತಿರುಮಜನಕಾಲಕೆ ನಾಉಕಟಳೆಯ ಮಾಡಿದ ಕರ್ಪೂರ, ಕಸ್ತೂರಿ, ಕುಂಕುಮ.

5................ವರ ಆರತಿಯ ಕರ್ಪೂರದ ಅಡಕಅಮುದು ಮುಂತಾದ ಉಪಚಾರಗಳು ನಂಮ................ ರಾಮಾನುಜಯ್ಯಗಳ ಶಿಷ್ಯ ಪಾರಂಪರಯಾಗಿ ಶಾತಾದ ಶ್ರೀವಯಿಷ್ಣವರು ಸೇವೆಯಮಾಡಿಬಹ

**ಹೋಗ ನಾಲುಕಟಳೆಯುಮಾಡಿದ ಪ್ರಕಾರದಲೆ ಆಗೋವಿಂದ ರಾಜದೇವರಿಗೆ ತಿರುಮಜ (ನ) ಕಾಲದಲೂ ನಂಮುಸೇವಯಾಗಿ ನಡಸುವ.** ರಾಮಾನುಜಯ್ಯಗಳಗೆ · ಕಟಳೆಯುಮಾಡಿದ............ಅವರ ಶಿಷ್ಯಪಾರಂಪರಯಾಗಿ ನಡಸಿಬಹುದು ಯಿದುವೊದಲಾಗಿ ಗೋವಿಂದರಾಜ ದೇವರು ಆರೋಗಣೆಯುಮಾಡುವ ನಯಿವೇದ್ಯ........ ಲವನು ತಿರುಮಲೆಯ ಮರಿಯಾದಯಲೆ ಹಂಚಿಕೊಂಡು ತಿರುಮಲೆ ದಿವಸ ತಿಂಗಳುವೊದಲಾದ ವಯಿಭವ (ಗ) ಳ ಮರಿಯಾದಯಲೆ ನಡಸಿಕೊಂಡು ಬಹುದು (.) ತಿರು ಚಾನೂರ ಅಳಜುಯಪೆರುಮಾಳದೇವರಿಗೆ ನಾಉ ತಿರುವೇಂಗಳನಾಥ ದೇವರ ಭಂಡಾರದಲಿ ಕಟಳೆಯುಮಾಡಿದ ಯರಡುಮುಖಾಣನಯಿವೇದ್ಯವನು ನಡಸಿಬಹುದು (.) ತಿರುಪತಿಯಲೂ................ತಿರುಪತಿಯವರಿಗೆ ನಡವ ಸಾಮ್ಯಗಳನೂ ಮರಿಯಾದಯಲೆ ನಡವಹಾಗೆ ಕಟಳೆಯ................ ತಿರುವೇಂಗಳನಾಥದೇವರು ಗೋವಿಂದರಾಜದೇವರಸೇವೆಯನೂಮಾಡಿಕೊಂಡು ಸುಖದಲೂಯಿರಹದು ಶ್ರೀ ರಾಮಚಂದ್ರ".

**ಇದರ ಆಂಗ್ಲಾನುವಾದ ಇಂತಿದೆ :—**

May prosperity abide! Hail! On Sunday the first Lunar day of the bright fortnight of the ಪುಷ್ಯ (month) in the (cyclic) year ಸರ್ವಜಿತ್, current with the ಶಕ year 1389, ಶ್ರೀಮಾನ್ ಮಹಾಮಂಡ ಳೇಶ್ವರ ಮೇದಿನಿಮೀಸರಗಂಡ ಕಠಾರಿ ಸಾಳುವ ನರಸಿಂಗಯ್ಯದೇವ ಮಹಾ ರಾಯ (issued) an edict to the ಸ್ಥಾನೀಕರ್‌ಗಳ್ (ಸ್) (ಸ್ಥಾನತ್ತಾರ್) of ತಿರುಪತಿ................(complying with) their request to us (ನರಸಿಂಗಯ್ಯ ದೇವ) that they might be permitted to distribute amongst themselves the ಪ್ರಸಾದ offered to ಗೋವಿಂದರಾಜದೇವ, similar to the practice (obtaining) as ತಿರುಮಲೆ, so as to maintain themselves there with................

................In the manner of the practice (of the temple) of ತಿರುವೇಂಗಳ ನಾಥದೇವ............for ಗೋವಿಂದ ರಾಜದೇವ............ shall hand over at ತಿರುಮಲೆ. We (have granted), as a present to the man of ತಿರುಪತಿ, the ಪ್ರಸಾದ offered to ಗೋವಿಂದರಾಜದೇವ............ ಹರಿವಾಣ (platefuls of cooked rice)........... that five ಹರಿವಾಣ out of the ಹರಿವಾಣ to be distributed, as already ordered to be served for eating, shall be reserved from the ವಿಲುಕ್ಕಾದು (doner's share) during the ಸಂಧಿ ಅಡೈಪ್ಪು (hour of distribution of the ಪ್ರಸಾದಂ)............ On the occasion of the ಮಕರ ಸಂಕ್ರಾಂತಿ (winter solstice) for (the offerings of) ಗೋವಿಂದರಾಜದೇವ, as our (charity)............ for the conduct of the stipulated ನೈವೇದ್ಯ (offerings) having granted the villages ಮೂಪದುವೇಟ and ಮಾಂಗೋಡುವೇಲದ in the ಪಡವೀಡುರಾಜ್ಯ as well as the taxes on property and water (i.e., Octroi duties) (hitherto) collected towards our palace, and also granted ಮಣನೂರು below the tank of ತಿರುಪತಿ to cover (any additional expenses), having provided, for the offering to the deity, of twenty six ಹರಿವಾಣ, one (ಅಪ್ಪ) ಹರಿವಾಣ and one ತಿರುಕ್ಕಣ್ಣಾಮಡೆ as the ನೈವೇದ್ಯ ............ six and a half ಹರಿವಾಣ, thirteen ಅಪ್ಪ ಪ್ರಸಾದ and............ ಅಕ್ಕಾಲಿ ಪ್ರಸಾದ forming the share of the

donor out of the offered ಹರಿವಾಣ ಪ್ರಸಾದ and ಪ್ರಸಾದ ಹರಿವಾಣ............

............ Our Queen............ this ಪ್ರಸಾದ will be delivered each day, through the disciples in succession of ಕಂದಾಳ ರಾಮಾನುಜಯ್ಯ to our ರಾಮಾನುಜ ಕೂಟ situated within the temple of ಗೋವಿಂದರಾಜದೇವ in ತಿರುಪತಿ, for being distributed among the ಶ್ರೀ ವೈಷ್ಣವ (ಸ್) ರ್‌ಗಳ್, both local and outside.

Towards the refined camphor, musk and saffron stipulated (to be offered) from (our) ರಾಮಾನುಜಕೂಟ to ತಿರುವೇಂಗಳನಾಥದೇವ at the time of the holy bath (ತಿರುಮಜನ ಕಾಲಕೆ).

............ Crude camphor for waving a light areca-nuts and other articles offered in homage ........................ the ಶಾತ್ತಾದ ಶ್ರೀ ವೈಷ್ಣವ (ಸ್) ರ್‌ಗಳ್ **the disciples of ರಾಮಾನುಜಯ್ಯ in succession, shall supply from our ರಾಮಾನುಜಕೂಟ.**

Just as we have stipulated, (the perfumery) shall continue (to be supplied) as our service to the above ಗೋವಿಂದರಾಜದೇವ. And this duty shall be discharged by his disciples in succession in consonance with our stipulations to ರಾಮಾನುಜಯ್ಯ.

From this time onwards (an equivalent of) the offerings made to ಗೋವಿಂದರಾಜದೇವ will be

appropriated from the offerings (made) at ತಿರುಮಲ್ಕೈ, and this practice will be observed both in the case of the daily, monthly and other (occasional) rites (contributing) to the splendour (of worship) of the deity.

The offering of two plateful of butter which we have stipulated to be made to ಅಳಗಿಯ-ಪೆರುಮಾಳ್ of ತಿರುಚಾನೂರ್ from the stores of ತಿರುವೇಂಗಳನಾಥದೇವ will be accordingly carried on.

It is also ordered that the fees and perquisites (pertaining to the office) of the men of ತಿರುಪತಿ,............ in ತಿರುಪತಿ............ shall be paid in accordance with the prevailing custom.

May the (ಶಾತ್ತಾದ ಶ್ರೀ ವೈಷ್ಣವರ್‌ಗಳ್) **thus live happily, rendering service to ತಿರುವೇಂಗಳನಾಥದೇವ and ಗೋವಿಂದರಾಜದೇವ.**

ಶ್ರೀ ರಾಮಚಂದ್ರ.

ಇಂತಹ ಸ್ವಯಂ ಸ್ಪಷ್ಟವಿರುವ ಶಾಸನಗಳ ಬಗೆಗೆ ಮತ್ತೆ ವಿವರಣೆ ಅನಗತ್ಯ. ಅಲ್ಲದೆ ಹೆಚ್ಚಿನ ವಿಷಯಕ್ಕೆ "ಪರಿಶಿಷ್ಟ 'ಅ' " ನೋಡಬಹುದು.

ಇಂತಹ ಉಜ್ವಲ ಜೀವನ ನಡೆಸಿದ ಕಂದಾಡೈ ರಾಮಾನುಜಯ್ಯಂಗಾರ್ ರವರ ಪೂರ್ವೇತಿಹಾಸ, ಭಕ್ತರಿಗೆ ಹೆಚ್ಚಿಗೆ ತಿಳಿಯದು. ಅವರ ಜೀವನ ಚರಿತ್ರೆಯನ್ನು ಕುರಿತು ಸಂಶೋಧಿಸುವುದು ಇತಿಹಾಸಶಾಸ್ತ್ರ ವಿದ್ಯಾರ್ಥಿಗಳಿಗೆ ಒಂದು ಪರಮ ಪೂಜ್ಯ ಕರ್ತವ್ಯವಾದೀತು.

(1) ಆದರೆ "ಕಂದಾಡೈ ರಾಮಾನುಜಯ್ಯಂಗಾರ್‌ರವರು ಶಾತ್ತಾದ ಶ್ರೀ ವೈಷ್ಣವ"ರೆಂದು–"ತಿರುಮಲೈ ಒಲುಗು" ಗ್ರಂಥವು ತಿಳಿಸುತ್ತದೆ ಎಂದು "ಶ್ರೀರಂಗದ ಕೋಯಿಲ್ ಒಲುಗು" ಗ್ರಂಥವು ನಿರೂಪಿಸುತ್ತದೆ.

ಇದು ಒಂದು ಪುಣ್ಯಸ್ಮರಣೆ, ಪ್ರಾತಃಸ್ಮರಣೀಯವಾದ ಪಾವನ ಪ್ರಸಂಗ.

---

1. Koyil Olugu of Sri Rangam Temple by T.S. Partha Sarathi—July 1954. (Published by T. T. D. Tirupathi) Chapter X, Page 73 :—

This ರಾಮಾನುಜದಾಸ is known in ತಿರುಪತಿ Inscriptions and records as ' ಕಂದಾಡೈ ರಾಮಾನುಜಯ್ಯಂಗಾರ್''. The ತಿರುಮಲೈ ಒಲುಗು describes him as a ''ಶಾತ್ತಾದ ಶ್ರೀ ವೈಷ್ಣವ'', and enumerates in details his benefactions to the Tirumalai Temple. The fact ರಾಮಾನುಜದಾಸ and ರಾಮಾನುಜಯ್ಯಂಗಾರ್ were one and the same person, can casily be realised as both the ''Koyil Olugu'' and the ''Tirumalai Olugu'' call him an adept (ನಿಪುಣ) in the art known as ''ಸ್ಪರ್ಶವೇದಿ'' and also record the service rendered by him to the temples at Sri Rangam and Tirumalai''.

ಕಂದಾಡೈ ರಾಮಾನುಜಯ್ಯಂಗಾರ್‌ರವರು ತಿರುಪತಿ ಕ್ಷೇತ್ರ ಬಿಟ್ಟು ಶ್ರೀರಂಗ ಕ್ಷೇತ್ರವನ್ನು ತಮ್ಮ ಸೇವಾಕ್ಷೇತ್ರವನ್ನಾಗಿ ಆರಿಸಿಕೊಂಡ ನಂತರ ಮಾಡಿದ ಸೇವಾ ಸಂಗತಿಗಳನ್ನು ಅರಿಯಲು ''ಶ್ರೀರಂಗದ ಕೋಯಿಲ್ ಒಲುಗು'', (ಗ್ರಂಥಕರ್ತ ಶ್ರೀ ಪಾರ್ಥಸಾರಥಿ) ಪುಸ್ತಕದ 10ನೇ ಅಧ್ಯಾಯದ (ಪುಟ 73) ಅಧ್ಯಯನ ಅತಿ ಅಗತ್ಯವಾಗುವುದು (ಇಲ್ಲಿ ಗ್ರಂಥಕರ್ತರು ಹೇಳುವಂತೆ-ಕಂದಾಡೈ ರಾಮಾನುಜಯ್ಯಂಗಾರ್‌ರವರು ಸಾಳುವ ನರಸಿಂಹನ ಸೋದರರು ಎನ್ನುವ ಮಾತು, ನಂಬಲರ್ಹವಾದ ಮಾತೇ ಅಲ್ಲ—ಸಂಪಾದಕ.)

# ಅಧ್ಯಾಯ ೫

# ಜೀವನ ಸಂಜೆ

ಶ್ರೀರಂಗದ ಕೋಯಿಲ್ ಒಲಗು ಪುಸ್ತಕದ 10ನೇ ಅಧ್ಯಾಯದಲ್ಲಿ ಕಂದಾಡೈ ರಾಮಾನುಜಯ್ಯಂಗಾರ್‌ರವರ ಬಗೆಗೆ ಇರುವ ವಿಷಯವನ್ನು ಸಂಗ್ರಹಿಸಿ ಕೊಡಲಾಗಿದೆ :—

ಶ್ರೀರಂಗದ ದೇವಸ್ಥಾನಕ್ಕೆ ಕಂದಾಡೈ ರಾಮಾನುಜದಾಸರು ಇತ್ತ ದತ್ತಿಯ ವಿಚಾರ ತಿಳಿಯೋಣ.

(1) ಈ ಸನ್ಯಾಸಿಯು 1491 (ಕ್ರಿ.ಶ.) ರಲ್ಲಿ ಶ್ರೀರಂಗಕ್ಕೆ ಬಂದವರಾದ ರಾಮ ರಾಜು ಎನ್ನುವವರು. ಇವರೇ ವಿಜಯನಗರದ ಅರಸ ವೀರನರಸಿಂಹ ಸಾಳು ವರ ಸೋದರರು.

ಕಂದಾಡೈ ರಾಮಾನುಜದಾಸರು ತಮ್ಮ ದಿವ್ಯ ದೇಶ ಪರ್ಯಟನೆಯಲ್ಲಿ ಅಯೋಧ್ಯೆಗೆ ಹೋಗಿ, ಅಲ್ಲಿ ಹಲವಾರು ರಾಮಕಂಠೀ ವರಹಗಳನ್ನು ಸಂಗ್ರಹಿಸಿದರು. ಅಲ್ಲಿಂದ ಚಂದ್ರಗಿರಿಗೆ ಹಿಂತಿರುಗಿ ಬಂದು, ತನ್ನ **ಸೋದರ** ವೀರ ನರಸಿಂಹ ಸಾಳುವ ಮಹಾರಾಯನಿಗೆ ಒಂದು ವರಹವನ್ನು ಇತ್ತರು. ಇದರ ಪ್ರತಿಫಲ ರೂಪವಾಗಿ 108 ದಿವ್ಯ ದೇಶಗಳಲ್ಲಿ ಕಂದಾಡೈ ರಾಮಾನುಜದಾಸರಿಗೆ ಮರ್ಯಾದೆ ಈಯುವಂತೆ ಸಾಳುವ ನರಸಿಂಹರಾಯನು ಒಂದು ನಿರೂಪವನ್ನು ಹೊರಡಿಸಿದನು. ನಂತರ ರಾಮಾನುಜದಾಸರು ತಿರುಪತಿಗೆ ಬಂದರು. ಅಲ್ಲಿನ ಮಂದಿರಗಳನ್ನೆಲ್ಲಾ ಒಂದು ವ್ಯವಸ್ಥಿತ ಆಡಳಿತಕ್ಕೆ ಒಳಪಡಿಸಿದರು.

---

1. ವೀರ ನರಸಿಂಹರಾಯನು ಕಂದಾಡೈ ರಾಮಾನುಜಯ್ಯಂಗಾರ್‌ರವರಿಗೆ ಅವಿಚ್ಛಿನ್ನ ಭಕ್ತನಾದುದರಿಂದ ಇವರಿಬ್ಬರೂ ಸೋದರರಾಗಿರಬೇಕೆಂಬ ಭ್ರಮೆ ಬಂದಿರಬೇಕು. ಇವರಿಬ್ಬರೂ ಸೋದರರು ಎನ್ನುವ ಮಾತಿಗೆ ಅಂತಹ ಪ್ರಬಲ ಆಧಾರ ಇದ್ದಂತೆ ಕಾಣುವುದಿಲ್ಲ.—ಸಂಪಾದಕ.

ನಂತರ 1491ರಲ್ಲಿ ಶ್ರೀರಂಗಕ್ಕೆ ಬಂದರು. ಇಲ್ಲಿ ಕಂದಾಡೈ ಅಣ್ಣನವರ ಶಿಷ್ಯರಾಗಿ, "ಕಂದಾಡೈ ರಾಮಾನುಜದಾಸರು" ಎಂಬ ಹೊಸ ಹೆಸರನ್ನು ಅಂಗೀಕರಿಸಿದರು. ಇಲ್ಲಿ ಏಕಾಂಗಿಗಳ ಸಭೆಗೆ ಆಚಾರ್ಯರಾದರು. ಮತ್ತು ಆಂಜನೇಯ ಮುದ್ರೆಯನ್ನು ಸರ್ವೋಚ್ಚವೆಂದು ಮಂದಿರಗಳಲ್ಲಿ ಸ್ಥಾಪಿಸಿದರು. ಕೊನೆಯವರೆಗೂ ಶ್ರೀರಂಗದಲ್ಲೇ ಉಳಿದರು.

ಏಕಾಂಗಿಗಳು ರಾಮಾನುಜರ ಪದ್ಧತಿಯನ್ನು ಕಟ್ಟುನಿಟ್ಟಾಗಿ ಅನುಸರಿಸುವಂತೆ ನೋಡಿಕೊಳ್ಳುತ್ತಿದ್ದರು. ಒಮ್ಮೆ ಕಾವೇರಿಯ ಪ್ರವಾಹದಿಂದ ಶ್ರೀರಂಗನ ಮಂದಿರವು ಶಿಥಿಲವಾಗಲು, ಇವರು ಕೂಡಲೆ ಕ್ರಮ ಕೈಗೊಂಡು ಜೀರ್ಣೋದ್ಧಾರ ಮಾಡಿದರು.

ವಿಜಯನಗರದ ಸಾಮಂತರಾಜನಾಗಿ ಬಂದ ಕೋನೇರಿ ರಾಜನು (ತಿರುಮಲ ರಾಜನ ನಂತರ) ತಿರುವನ್ನೈಕ್ಕವಲ್ ಎಂಬ ನಗರದ ಶೈವರೊಡನೆ ಸೇರಿಕೊಂಡು ಶ್ರೀ ವೈಷ್ಣವರಿಗೆ ಕಿರುಕುಳ ನೀಡಲಾರಂಭಿಸಿದನು. ಆಗ ರಾಮಾನುಜದಾಸರು ನರಸನಾಯಕರ ಸಹಾಯ ಪಡೆದು (ನರಸಿಂಹ ಸಾಳುವನ ಮಗನಾದ ಇಮ್ಮಡಿ ನರಸಿಂಹರಾಯನ ಸೇನಾನಿ) ಕೋನೇರಿ ರಾಜನಿಂದ ಶ್ರೀ ವೈಷ್ಣವರನ್ನು ರಕ್ಷಿಸಿದರು. ಇತ್ತ ನರಸ ನಾಯಕರು ಕೋನೇರಿ ರಾಜನ ಮೇಲೆ ಏರಿಹೋಗಿ ಅವನನ್ನು ಕೊಂದರು.

ಅಲ್ಲದೆ, ಈ ನರಸನಾಯಕನು ಮತ್ತು ಆತನ ಮಗ ನಗಮನಾಯಕನು ಶ್ರೀರಂಗದ ಶ್ರೀರಂಗನಾಥನ ಭಕ್ತರಾದರು. ತನ್ನ ಭಕ್ತಿಯ ಪ್ರತೀಕವಾಗಿ ಶ್ರೀರಂಗನಾಥನ ಮೇಲೆ ಸ್ವತಃ ಮುತ್ತು ರತ್ನಗಳ ಮಳೆ ಕರೆಯಿಸಿದನು. ಅನೇಕ ಶಾಶ್ವತ ದತ್ತಿಗಳನ್ನು ನೀಡಿದನು. (ಇದಕ್ಕೆ ಕಂದಾಡೈ ರಾಮಾನುಜಯ್ಯಂಗಾರ್‌ರವರ ಪ್ರೇರಣೆ ಇಲ್ಲದುಂಟೆ ?–ಸಂಪಾದಕ).

ನಂತರ ವೀರಸುಂದರಬ್ರಹ್ಮರಾಯನು ನಿರ್ಮಿಸಿದ್ದ ಗೋಡೆಗಳ ಮೇಲೆ ರಾಮಾನುಜದಾಸರು ಒಂದು ಭವ್ಯ ಗೋಪುರ ನಿರ್ಮಿಸಿದರು. ಸಾವಿರ ಕಂಬದ ಮಂಟಪವನ್ನು ದುರಸ್ತು ಮಾಡಿಸಿದರು. ಪೂರ್ವ ದಿಕ್ಕಿನ ಅಕಲಂಕನ್ ಗೋಡೆಯ ಮೇಲೆ, ಮತ್ತೊಂದು ಗೋಪುರ ನಿರ್ಮಿಸಿದರು. ಮಂದಿರದ

ವಿಮಾನಕ್ಕೆ (ಮುಖ್ಯ ಗೋಪುರ) ಮತ್ತು ಇತರೆ ವಾಹನಗಳಿಗೆ ಚಿನ್ನದ ಗಿಲಾವು ಮಾಡಿಸಿದರು. ವಿಶ್ವಲೇಶ್ವರ ಮಂದಿರದ ದುರಸ್ತಿ ಮೊದಲುಗೊಂಡು ಇತರೆ ಜೀರ್ಣೋದ್ಧಾರ ಕೆಲಸ ಕೈಗೊಂಡರು. ಇದರಿಂದ–ಮುಸಲ್ಮಾನರ ದಾಳಿಯಿಂದಾದ ಎಲ್ಲ ಶೈಥಿಲ್ಯಗಳು ಹೋಗಿ–ಮತ್ತೆ ಕಟ್ಟಡಗಳು ಭದ್ರವಾದವು. ಶ್ರೀರಂಗನಾಥನು ಇವರ **ವೈವಿಧ್ಯಮಯ ಸೇವೆಯನ್ನು ಕಂಡು "ಕುಲಶೇಖರ ಪೆರುಮಾಳ್" ಎಂಬ ಬಿರುದನ್ನು ನೀಡಿದನು.**

(ಈ ಗೌರವ ದೇವತೆಗಳೂ ಅಸೂಯೆ ಪಡುವಂತಹ ವಿಷಯವೆಂದರೆ ಸತ್ಯವಷ್ಟೇ ಅಲ್ಲ. ಸುಂದರವಾಗಿದೆ. ಶಿವ ಆಗಿದೆ.–ಸಂಪಾದಕ)

ಈ ಹಿಂದೆ (ಬಹುಶಃ 1327–28 ಕ್ರಿ.ಶ.ರಲ್ಲಿ) ಶ್ರೀರಂಗದ ಮೇಲೆ ನಡೆದ ಮುಸಲ್ಮಾನರ ದಾಳಿಯಲ್ಲಿ 12 ಸಹಸ್ರ ವೈಷ್ಣವರ ಕೊಲೆಯಾಗಿ ಮಂದಿರದ ಆಡಳಿತ ಅಭದ್ರವಾಯಿತು. ಇತ್ತೀಚೆಗೆ ವಿಜಯನಗರದ ಅರಸರೂ ಮಂದಿರದ ಆಡಳಿತದಲ್ಲಿ ಪ್ರವೇಶಿಸುತ್ತಿದ್ದರು. ಇವೆಲ್ಲಾ ಸೇರಿ ಮಂದಿರದ ಆಡಳಿತವು, ವ್ಯವಸ್ಥಿತ ಅವ್ಯವಸ್ಥೆಯಂತಾಗಿತ್ತು. ರಾಮಾನುಜರ ಕಾಲದಲ್ಲಿ ಏರ್ಪಾಟಾಗಿದ್ದ ವ್ಯವಸ್ಥೆಯು ಕುಸಿದು ಬಿದ್ದಿದ್ದಿತು.

ಮುಸಲ್ಮಾನರ ದಂಡಯಾತ್ರೆಗೆ ಮುನ್ನ ಈ ಭಾಗಕ್ಕೆ ರಾಜರಾಗಿದ್ದಂತಹ ಚೇರರು, ಚೋಳರು, ಮತ್ತು ಪಾಂಡ್ಯ ರಾಜರು (ಸರ್ವಮಾನ್ಯ ಭೂಮಿ, ಹಳ್ಳಿಗಳ ಆಡಳಿತದಲ್ಲಿರಬಹುದಾದ ಲೋಪದೋಷಗಳನ್ನು ಸರಿಮಾಡಿಸುವ ಉದ್ದೇಶ ವಿನಃ) ಮಂದಿರದ ಒಳಾಡಳಿತದಲ್ಲಿ ಎಂದೂ ಪ್ರವೇಶಿಸುತ್ತಿರಲಿಲ್ಲ. ಆದರೆ ವಿಜಯನಗರದ ಅರಸರ ವಶಕ್ಕೆ ಈ ಪ್ರದೇಶವು ಬಂದಾಗ, ಅವರ ಚಂಚು ಪ್ರವೇಶವು ಪ್ರಾರಂಭವಾಯಿತು. ಪ್ರಭುತ್ವದ ಅಂಗವಾಗಿ ಮಂದಿರದ ವ್ಯವಸ್ಥಾಪಕರೂ, ಮೇಲ್ವಿಚಾರಕರೂ ನೇಮಕಗೊಂಡರು. ಮಂದಿರದ ಆಡಳಿತವು ಪ್ರಭುತ್ವದ ಅಂಗವಾಯಿತು.

ಮುದಲ್ಕೆ ಆಂಡಾನ್‌ನಿಂದ ಪ್ರಾರಂಭಗೊಂಡ ಕಂದಾಡೈ ವಂಶವು–ರಾಮಾನುಜಾಚಾರ್ಯರಿಂದ 190 ವರುಷಗಳ ವರೆಗೆ–ಮಂದಿರದ ಗೌರವಕ್ಕೆ ಪಾತ್ರವಾಗಿಯೇ ನಡೆದುಕೊಂಡು ಬಂದಿತ್ತು. ಮುಸಲ್ಮಾನರ ದಾಳಿಯ ನಂತರ

ಮಂದಿರದಲ್ಲಿ ಸಲ್ಲಬೇಕಾದ ಗೌರವ ಪ್ರಾಧಾನ್ಯಗಳು, ಶ್ರೀರಂಗ ನಾರಾಯಣ ಜೀಯರ್‌ರವರಾದ ನಂತರ ಬಂದ, ಕಂದಾಡೈ ವಂಶದವರಲ್ಲೂ, ವಾಧೂಲ ದೇಶಿಕರ ವಂಶದಲ್ಲೂ ಹಂಚಿಹೋದವು. ಆದರೆ ಈ ವ್ಯವಸ್ಥೆಯು ಈ ರೀತಿ ಯಲ್ಲೂ ಬಹಳ ಕಾಲ ಮುಂದುವರಿಯಲಿಲ್ಲ. ಅಲ್ಲದೆ ವಿಜಯನಗರದ ಅರಸರು "ಚಕ್ರರಾಯ" ಎಂಬ ಮಂದಿರದ ಆಡಳಿತಾಧಿಕಾರಿ ಹುದ್ದೆಯನ್ನು ಪ್ರಭುತ್ವದ ಪರವಾಗಿ ನೇಮಿಸಿದುದರಿಂದಲೂ, ಕಂದಾಡೈ ರಾಮಾನುಜ ದಾಸರು ತಿರುಪತಿಯಿಂದ ಶ್ರೀರಂಗಕ್ಕೆ ಹಿಂತಿರುಗಿ ಬಂದುದರಿಂದಲೂ, ಮಂದಿರ ದಲ್ಲಿ ಅನೂಚಾನವಾಗಿ ನಡೆದುಕೊಂಡು ಬಂದಿದ್ದ ವ್ಯವಸ್ಥೆಯ ವಿಧಾನಸೌಧ ದಲ್ಲಿ, ದೊಡ್ಡ ಬಿರುಕುಗಳು ವಿಶಾಲವಾಗತೊಡಗಿದವು. ಪಂಚರಾತ್ರೋಕ್ತ ಸಿದ್ಧಾಂತದಂತೆ ವ್ಯವಸ್ಥೆಯಾಗಿದ್ದ ಮಂದಿರದ ಆಡಳಿತವು ನಿರ್ನಾಮವಾಯಿತು.

ಈ ಮಧ್ಯೆ ಈ ಭಾಗದ (ಮಧುರೆ) ಆಡಳಿತವು 1498 ರಲ್ಲಿ ವಿಶ್ವನಾಥ ನಾಯಕನ ಅಧೀನವಾಯಿತು. ವಾಧೂಲ ದೇಶಿಕರ ಕುಮಾರರಾದಂತಹ ನರಸಿಂಹಾಚಾರ್ಯರು ಈ ನಾಯಕನ ಪ್ರೀತಿಗೆ ಪಾತ್ರರಾದರು. ಆದರಿಂದ ಮಂದಿರಕ್ಕೆ ಚಿನ್ನ ಬೆಳ್ಳಿಯ ಒಡವೆಗಳು, ಮತ್ತು ಬೆಲೆ ಬಾಳುವ ಅನೇಕ ಪಾತ್ರೆ ಪರಡಿಗಳು ದೊರೆತವು. ಮೂವತ್ತು ವರುಷಗಳ ನಂತರ ಬಂದ ಕೃಷ್ಣಪ್ಪನಾಯಕನೂ ಮಂದಿರಕ್ಕೆ ಹಲವಾರು ದತ್ತಿಗಳನ್ನು ನೀಡಿ ಪೋಷಿ ಸಿದನು.

ಆದರೆ ಒಂದು ದುರ್ಘಟನೆ ಮತ್ತೆ ಪ್ರಾರಂಭವಾಯಿತು. 1579ರಲ್ಲಿ ವೀರಪ್ಪನಾಯಕನು ಮಧುರೆಯಲ್ಲಿ ಆಳುತ್ತಿದ್ದಾಗ ಅಂದಿನ ಧಾರ್ಮಿಕ ಪ್ರಮುಖ ವ್ಯಕ್ತಿಗಳಾಗಿದ್ದ ಉತ್ತಮನಂಬಿಯವರಿಗೂ, ತಿರುಮಲಾಚಾರ್ಯ ಭಟ್ಟರಿಗೂ ತಮ್ಮ ತಮ್ಮ ಸ್ಥಾನಮಾನದ ಬಗೆಗೆ ವೈಮನಸ್ಸು ಪ್ರಾರಂಭ ವಾಯಿತು ವೀರಪ್ಪನಾಯಕನು ಉತ್ತಮನಂಬಿಯವರ ಪಕ್ಷ ಹಿಡಿದನು. ಮಂದಿರದ ಆಡಳಿತದಲ್ಲಿ ಭಟ್ಟರ ಸ್ಥಾನ ಮತ್ತು ಗೌರವಗಳನ್ನು ರದ್ದುಪಡಿ ಸಿದನು. ಕೆಲವು ಕಾಲದ ನಂತರ ವಿಜಯನಗರದ ಅರಸರು ತಿರುಚನಾಪಳ್ಳಿ ಯನ್ನು ಆಕ್ರಮಿಸಿದಾಗ ಭಟ್ಟರು ಈ ಅರಸರ ಬೆನ್ನ ಹಿಂದೆ ಬಿದ್ದರು. ಆದರೆ ಉತ್ತಮನಂಬಿಗಳು ನಾಯಕನ ಗೌರವ ಸಂಬಂಧವನ್ನು ದುರುಪಯೋಗ

ಪಡಿಸಿಕೊಂಡು, ಭಟ್ಟರ ಮನೆ ಮತ್ತು ಆಸ್ತಿಯನ್ನು ಮುಟ್ಟುಗೋಲಿಗೆ ಈಡು ಮಾಡಿದರು. ಭಟ್ಟರು ರಾಜಬಂದಿಗಳಾಗಬೇಕಾಯಿತು. ಬೇರೊಬ್ಬ ಭಕ್ತ ರೆಡ್ಡಿಯು, ರಾಜನಿಗೆ 20 ಸಹಸ್ರ ಚಿನ್ನದ ವರಹಗಳನ್ನು ಇಡುಗಂಟಾಗಿಟ್ಟು, ಇವರನ್ನು ಬಿಡಿಸಿಕೊಳ್ಳಬೇಕಾಯಿತು. ಭಟ್ಟರು ಶ್ರೀರಂಗವನ್ನು ತ್ಯಜಿಸಿ ತುರ್ಕೈಯೂರ್‌ನಲ್ಲಿ ನೆಲೆಸಿದರು.

ಆದರೆ ವೀರಪ್ಪನಾಯಕನ ನಂತರ ಅಧಿಕಾರಕ್ಕೇರಿದ ಅವನ ಮಗ ತಿರುಮಲಸೂರಿಯು, ಮತ್ತೆ ಉತ್ತಮನಂಬಿಗಳನ್ನು ತಮ್ಮ ಅಧಿಕಾರದಿಂದ ಇಳಿಸಿ, ಅವರ ಸ್ಥಳದಲ್ಲಿ ಭಟ್ಟರನ್ನು ನಿಯುಕ್ತಗೊಳಿಸಿದನು. ಆದುದರಿಂದ ಉತ್ತಮನಂಬಿಗಳು ಅನಿವಾರ್ಯವಾಗಿ ಭಟ್ಟರೊಡನೆ ಸಂಧಾನ ಮಾಡಿಕೊಳ್ಳಬೇಕಾಯಿತು.

ಹೀಗಾಗಿ ಪ್ರಭುತ್ವವು ಶ್ರೀರಂಗ ಮಂದಿರದ ಆಡಳಿತದ ಬಗೆಗೆ ಒಂದಲ್ಲ ಒಂದರ ಬಗೆಗೆ ಸದಾ ಅತೃಪ್ತಿಯಿಂದಲೇ ಇರುತ್ತಿತ್ತು.

ಇತ್ತ ಅಂಡನ್ ವಂಶದಲ್ಲಿ ಬಂದ ಪ್ರಣತಾರ್ಥಿಹರ ದೇಶಿಕರ ಮೊಮ್ಮಗನಾದ ಶ್ರೀನಿವಾಸ ದೇಶಿಕರು, ತಮ್ಮ ವಿದ್ವತ್ ಪ್ರಭೆಯಿಂದ ಪ್ರಸಿದ್ಧಿಗೆ (1588 ರ ಸುಮಾರಿನಲ್ಲಿ) ಬಂದರು. ಇದು ಬಹುಶಃ ಚೊಕ್ಕನಾಥ ನಾಯಕನ ಕಾಲವಿರಬೇಕು. ವಜ್ರಾಂಗಿಯೆಂಬ ಅದ್ವೈತಿ ಪಂಡಿತೋತ್ತಮನನ್ನು ವಾದದಲ್ಲಿ ಎದುರಿಸಲು ಇವರನ್ನು ಶ್ರೀರಂಗಕ್ಕೆ ಕರೆಯಿಸಲಾಯಿತು. ಅಂದಿನ ಪ್ರಭುವಾದ ಚೊಕ್ಕನಾಥ ನಾಯಕನ ನಾಲ್ವರು ಸೋದರರು, ತೀರ್ಪುಗಾರರ ಸ್ಥಾನದಲ್ಲಿ ಕುಳಿತು ವಿದ್ವಾಂಸರ ವಿವಾದವನ್ನು ಕೇಳುತ್ತಿದ್ದರು. ಈ ವಿದ್ವತ್ ಸಭೆ (ವಾದ) 44 ದಿನಗಳು ಅಖಂಡವಾಗಿ ನಡೆಯಿತು. ಪ್ರಭುತ್ವದ ತೀರ್ಪುಗಾರ ನಾಯಕರು, ಸ್ವತಃ ವಜ್ರಾಂಗಿಯ ಬಗೆಗೆ ಒಲವಿರುವವರಾಗಿದ್ದರೂ ಶ್ರೀನಿವಾಸ ದೇಶಿಕರು ವಾದ ಭೂಮಿಯಲ್ಲಿ ವಿಜಯಿಗಳಾದರು. ಅಷ್ಟೇ ಅಲ್ಲ, ಎದುರಾಳಿ ವಿದ್ವಾಂಸ ಶಿರೋಮಣಿಗಳನ್ನು ವಿಶಿಷ್ಟಾದ್ವೈತ ಮತಕ್ಕೆ ಪರಿವರ್ತಿಸಿದರು. ಅಂತಹ ಪ್ರೇಮದ ಗೆಲುವು ಅವರದಾಗಿತ್ತು.

ಇದರಿಂದಾಗಿ ಕಂದಾಡೈ ವಂಶಕ್ಕೆ ಕಳೆದುಹೋಗಿದ್ದ ಸ್ಥಾನಮಾನಗಳು ಮತ್ತೆ (ಇವರ ಮೂಲ ಪುರುಷ ಮುದಲ್ಯೆ ಆಂಡಾನ್‌ರವರು) ದೊರಕಿದವು. ಕೆಲವು ಕಾಲ ಮಸುಕಾಗಿದ್ದ ಕಂದಾಡೈ ವಂಶದ ಪ್ರತಿಭೆ ಮತ್ತೆ ಶ್ರೀನಿವಾಸ ದೇಶಿಕರ ವಿದ್ವತ್ ಪುಣ್ಯದಿಂದ ದೊರಕಿತು. ಇದರಿಂದ ಇವರ ವಂಶದವರು ಶ್ರೀರಂಗನಾಥನಿಗೆ ಮತ್ತೆ ತಮ್ಮ ಸೇವೆಯನ್ನು ಸಲ್ಲಿಸಲು ಅವಕಾಶ ವಾಯಿತು.

---

ಕಂದಾಡೈ ರಾಮಾನುಜಯ್ಯಂಗಾರರು ಕ್ರಿ.ಶ. 1496ರಲ್ಲೇ ತೀರಿಕೊಂಡರೆಂದು ತಿಳಿದು ಬಂದಿರುವುದರಿಂದ, ಮುಂದೆ ನಡೆದ ದುರ್ಘಟನೆಗೆ ಇವರು ನಿಮಿತ್ತರಾಗಿರಲಿಲ್ಲ. ತಿರುಪತಿಯಲ್ಲಿ ಅದ್ವಿತೀಯ ಆಡಳಿತಗಾರರಾಗಿ ಯಶೋದುಂಭಿಯನ್ನು ಮೊಳಗಿಸಿ ಕೊಂಡವರು, ಶ್ರೀರಂಗಕ್ಕೆ ಬಂದಾಗ, ಅಲ್ಲಿದ್ದ ಆಡಳಿತ ವರ್ಗವು ಈ ಹಿಂದಿನ ಅಪ್ರಿಯ ಘಟನೆಗಳ ವಾಂಛೆಯಿಂದ, ಇವರೊಡನೆ ಸಹಕರಿಸದೆ ಇದ್ದುದು ನಾಡಿನ ದೌರ್ಭಾಗ್ಯ. ಆದರೆ ಕಂದಾಡೈ ರಾಮಾನುಜಯ್ಯಂಗಾರ್‌ರವರು ತಿರುಪತಿಯ ಶ್ರೀನಿವಾಸನ ಕೃಪೆಗೆ ಪಾತ್ರರಾಗಿದ್ದವರು, ಶ್ರೀ ರಂಗದ ಶ್ರೀರಂಗನಾಥನ ಕೃಪೆಗೂ ಪಾತ್ರರಾಗುವುದಕ್ಕೇ ಆ ಕ್ಷೇತ್ರದ ಅವಕಾಶವನ್ನು ತ್ಯಜಿಸಿ ಈ ಕ್ಷೇತ್ರಕ್ಕೆ ಬಂದಿರಬೇಕು. ಇವರು ಬದುಕಿದ್ದಷ್ಟು ಕಾಲ (ಶ್ರೀರಂಗದಲ್ಲಿ) ಇಲ್ಲಿ ಸಲ್ಲಿಸಿದ ಸೇವೆಯ ವಿವರ ತಿಳಿಯುವುದು ಅಗತ್ಯ. ಆದ ರಿಂದ ಈ ದಿಶೆಯಲ್ಲಿ ಹೆಚ್ಚಿನ ಅಧ್ಯಯನವೂ ಅಗತ್ಯ.— ಸಂಪಾದಕ

# ಅಧ್ಯಾಯ ೬

# ಶ್ರೀರಂಗ ಕ್ಷೇತ್ರದಲ್ಲಿ

ಕ್ರಿಶ್ಚಿಯನ್ನರಿಗೆ ನಾಸರೆತ್ ಮತ್ತು ವೆಟಿಕಾನ್, ಯಹೂದಿಗಳಿಗೆ ಜರೂಸಲೇಂ, ಮುಸಲ್ಮಾನರಿಗೆ ಮೆಕ್ಕ, ಭಾರತೀಯರಿಗೆ ಕಾಶಿ ಇರುವಂತೆ, ಶ್ರೀವೈಷ್ಣವರಿಗೆ (ಹಿಂದು ಧರ್ಮದಲ್ಲಿ ಅಂತರ್ಗತ) ಶ್ರೀರಂಗಕ್ಷೇತ್ರ ಬಹು ಪವಿತ್ರವಾದ ಸ್ಥಳ. ಶ್ರೀರಂಗನಾಥನೇ ಇಲ್ಲಿ ಅರ್ಚಾವತಾರಿಯಾಗಿ ಅವತರಿಸಿದ್ದಾನೆ. ಇದು ಆಳ್ವಾರರ ಆರಾಧನಾ ಕೇಂದ್ರ. ನಾಥಮುನಿ, ಯಾಮುನ, ಭಗವಾನ್ ರಾಮಾನುಜರು—ಈ ಆಚಾರ್ಯತ್ರಯರು-ಅಲಂಕರಿಸಿದ ಪೀಠ. **ವಿಶಿಷ್ಟಾದ್ವೈತ ಸಿದ್ಧಾಂತದ ತವುರು; ಜ್ಞಾನದ ಜೋಗ್.**

"ಮಾನವನ ಊರ್ಧ್ವ ಗಮನದ ಸಾಹಸವನ್ನು ದ್ವಿಮುಖವಾಗಿ ಗುರುತಿಸಬಹುದು. ಒಂದು ನಾಗರೀಕತೆ, ಇನ್ನೊಂದು ಸಂಸ್ಕೃತಿ. ಒಂದು ಬಾಹ್ಯ ಮುಖಿ, ಇನ್ನೊಂದು ಅಂತರ್ಮುಖಿ. ಆಂತರಿಕವಾದ ಮನಸ್ಸಿನ ಚಿತ್ ಶಕ್ತಿಯ ರಸಗಂಗೆಯನ್ನು, ಆತ್ಮಶ್ರೀಯ ಪ್ರತಿಬಿಂಬವನ್ನು "ಸಂಸ್ಕೃತಿ" ಎನ್ನಬಹುದು." **ಇಂತಹ ಸಂಸ್ಕೃತಿಯ ಶ್ರೀತವುರೇ ಶ್ರೀರಂಗ.**

**ಇಂತಹ ಕ್ಷೇತ್ರದಲ್ಲಿ ಶಾತ್ತಾದ ಶ್ರೀವೈಷ್ಣವರು** ಬಹು ಹಿಂದಿನಿಂದಲೂ, ಈ ಮಂದಿರದಲ್ಲಿ—ತಿರುಪತಿಯಲ್ಲಿರುವಂತೆ—ಶ್ರೀ ರಂಗನಾಥನ ಸೇವೆಯಲ್ಲಿ ತೊಡಗಿದ್ದಾರೆ. ಬಹುಶಃ ಇಂತಹ ಸೇವಾಕಾರ್ಯದಲ್ಲಿ ಆಚಾರ್ಯ ನಾಥಮುನಿ, ಯಾಮುನ, ರಾಮಾನುಜರ ಅವತಾರಕಾಲಕ್ಕಿಂತ ಮುಂಚಿನಿಂದಲೂ ತೊಡಗಿದ್ದರೂ ಇರಬಹುದು. ಇದರ ಬಗೆಗೆ ಹೆಚ್ಚು ಸಂಶೋಧನೆ ಅಗತ್ಯ. ಆದರೆ ಭಗವಾನ್ ರಾಮಾನುಜಾಚಾರ್ಯರ ಕಾಲದಿಂದ **ಶಾತ್ತಾದ**ರನ್ನು ಯಾವ ಯಾವ ಕೆಲಸಗಳಿಗೆ ನೇಮಿಸಲ್ಪಟ್ಟಿದ್ದರು ಎನ್ನುವುದರ ಬಗೆಗೆ ಸ್ಪಷ್ಟ ಕುರುಹು ಕಾಣಬರುವುದು. ಈ ಸತ್-ಸಂಪ್ರದಾಯ ಮೊಟ್ಟಮೊದಲು ಯಾರಿಂದ, ಯಾವ ಕಾಲದಲ್ಲಿ ಪ್ರಾರಂಭವಾಯಿತು ಎನ್ನುವುದರ ಬಗೆಗೆ ಸಂಶೋಧನೆ ಅಗತ್ಯವಾಗಿದೆ. ಕಾಲನ ಗರ್ಭದಲ್ಲಿ ಅಡಗಿ ಹೋಗಿರುವ ಸತ್ಯಾಂಶ

ಗಳನ್ನು ಹೊರಗೆ ಸೆಳೆಯಬೇಕಾಗಿದೆ. ಈಗ ರೂಢಿಯಲ್ಲಿರುವ ಸಂಪ್ರದಾಯ ಗಳ ಒಂದು **ಇಣಿಕು ನೋಟವನ್ನು** ಮಾತ್ರ ಇಲ್ಲಿ ಸಂಗ್ರಹಿಸಿ ಕೊಡಲಾಗಿದೆ. ಸಮಗ್ರ ಚಿತ್ರ ವೀಕ್ಷಣೆಗೆ ಪ್ರತ್ಯೇಕ ಅಧ್ಯಯನ ಅಗತ್ಯ.

**ವೈಕುಂಠ ಏಕಾದಶಿ :—**

**ವೈಕುಂಠಏಕಾದಶಿ** ಉತ್ಸವವು ವೈಷ್ಣವರಿಗೆ ಅದರಲ್ಲೂ ಶ್ರೀವೈಷ್ಣವರಿಗೆ ಬಹು ಪವಿತ್ರವಾದ ಉತ್ಸವ, ಹಾಗೂ ಹಬ್ಬ. ತುಷ್ಟಿ ಪುಷ್ಟಿ, ಶಾಂತಿಯನ್ನು ನೀಡುವ ಹರಿ—ದಿನ. ಈ ಹಬ್ಬದ ಶ್ರೀರಂಗದ ಶ್ರೀಮಂದಿರವು, ವೈಕುಂಠ ಗಾಮಿಗಳು ತಂಗುವ ನಿಲ್ದಾಣ. ಇದು ಇಹದ ದಡವನ್ನು ಪರದ ದಢಕ್ಕೆ ಹೊಂದಿಸುವ ಸೇತುವೆ. ವೈಕುಂಠ ಏಕಾದಶಿ ಆಚಾರಣೆಯು ಅಂತಹ ದೇವ ಪಯಣಕ್ಕೆ ಸಿದ್ಧವಾಗುವ ಸಂಸ್ಕೃತಿಕ ನಾಂದಿ—ಉತ್ಸವ.

ಆದ್ದರಿಂದ ಈ ಉತ್ಸವ, ಈ ಹಬ್ಬ ಶ್ರೀ ರಂಗಕ್ಷೇತ್ರದಲ್ಲಿ ಅಚ್ಚುಕಟ್ಟು ತನದಿಂದ, ವೈಭವದಿಂದ; ಪಾಂಚರಾತ್ರ ಪದ್ಧತಿಯಲ್ಲಿ ನಡೆಯಲು ಬಹು ಹಿಂದಿ ನಿಂದಲೂ ವ್ಯವಸ್ಥೆಯಾಗಿದೆ. ಅದರಲ್ಲೂ ರಾಮಾನುಜರ ಕಾಲದಿಂದ ಈ ಉತ್ಸ ವಕ್ಕೆ ಒಂದು ಶಾಸ್ತ್ರೀಯವಾದ ಚೌಕಟ್ಟು ನಿರ್ಮಿಸಲಾಗಿದೆ. ಇದರಲ್ಲಿ ಚಾಚು ತಪ್ಪುವಂತಿಲ್ಲ. ರವೆಯಷ್ಟು ಹೆಚ್ಚುಕಡಿಮೆಯಾಗುವಂತಿಲ್ಲ. ಅಂತಹ ಸತ್ ಸಂಪ್ರದಾಯ 11-12ನೇ ಶತಮಾನದಿಂದಲೂ ಬಂದಿದೆ. ಇದುವರೆವಿಗೂ ಉಳಿದು ಬಂದಿದೆ.

ಧನುರ್ ಮಾಸವು ಶ್ರೀವೈಷ್ಣವರಿಗೆ ಬಹು ಪವಿತ್ರವಾದ ತಿಂಗಳು. ಇದನ್ನು ದೇವತೆಗಳ ಉಷಃ ಕಾಲ ಎಂದು ಭಾವಿಸಲಾಗಿದೆ. ಬೆಳಗಿನ ಝಾವದ ಬ್ರಾಹ್ಮೀ-ಮುಹೂರ್ತ ಸಮಯದಲ್ಲಿ ಸಾತ್ವಿಕ ಗುಣವೂ ವಿಕಸಿಸುವ ಸಂಧ್ಯೆ. ಅಜ್ಞಾನದ ಕತ್ತಲು ಹರಿದು, ಜ್ಞಾನದ ಬೈಗು ಹರಿಯುವ ಜೀವನ ಸಂಧ್ಯೆ ಅದು. ಆದ್ದರಿಂದ ಭಗವದಾರಾಧನೆಗೆ ಇದು ಒಂದು ಸುಂದರ ಮತ್ತು ಪವಿತ್ರ ಪ್ರಶಾಂತ ಕಾಲ. ಭಕ್ತರು ಸ್ತೋತ್ರಗಳನ್ನು ಹೇಳುತ್ತಾ-ನಿದ್ರಿಸಿರುವನೆಂದು ಭಾವಿಸಿರುವ **ಭಗವಂತನನ್ನು ಉಷಃಕಾಲದಲ್ಲಿ ಎಚ್ಚರಗೊಳಿಸಿ**, ಆತನು ತನ್ನ ಪೂಜೆಗೆ ಅಣಿಯಾಗುವಂತೆ ಪ್ರಾರ್ಥಿಸುವ ಕಾಲ. ಆದಿನಗಳಲ್ಲಿ ಅಕ್ಕಿಯನ್ನು ದ್ವಿದಳ ಧಾನ್ಯವನ್ನು ಬೆರಿಕೆ ಮಾಡಿ "ಪೊಂಗಲು" ಎಂಬ ಸಾತ್ವಿಕ ಆಹಾರವನ್ನು

ಸಿದ್ಧವಾಡಿ, ಅದರಲ್ಲಿ ಭಕ್ತಿ-ಘೃತ ಬೆರಸಿ ನೈವೇದ್ಯ ಮಾಡುವುದು ಒಂದು ವೈಶಿಷ್ಟ್ಯ. ಸತತವಾಗಿ ಭಗವಂತನನ್ನು ಹನ್ನೆರಡು ವರ್ಷಗಳ ಕಾಲ ಪೂಜಿಸುವ ಪ್ರತಿಫಲವು, ಒಂದೇ ಧನುರ್ಮಾಸ ಕಾಲದ ಪೂಜೆಗೆ ಸಮನೆಂದು ಶ್ರೀ ವೈಷ್ಣವ ಭಕ್ತವೃಂದವು ನಂಬುತ್ತದೆ. ಇಂತಹ ಈ ಧನುರ್ಮಾಸ ಉತ್ಸವವನ್ನು ಶುಕ್ಲ ಪ್ರಥಮದಿಂದ 20 ದಿನಗಳು ನಡೆಸಬೇಕೆಂದು ಶ್ರೀ ಪಾಂಚರಾತ್ರ ಸಂಹಿತೆಯಲ್ಲಿ ನಿಯಮಮಾಡಲಾಗಿದೆ. ಮೊದಲ 10 ದಿನಗಳಲ್ಲಿ ಭಕ್ತರು ತಮ್ಮ ಸ್ತೋತ್ರಗಳ ಭಾವುಕತೆಯಿಂದ, ಆತನನ್ನು ಗಾನ ತರಂಗದಲ್ಲಿ ಉಯ್ಯಾಲೆ ಯಂತೆ ತೂಗಿ, ತಾವೂ ಸಂತೋಷ ಪಡುತ್ತಾರೆ. ಆ ಶೇಷಶಾಯಿಯ ಮುಂದೆ ನಾದ ಬ್ರಹ್ಮನು ಭಕ್ತರ ಶ್ರೀ ಕಂಠದಲ್ಲಿ ಇಂಚರ ಧ್ವನಿ ರೂಪ ತಾಳಿ ಎಲ್ಲರ ಹೃದಯ ವೀಣೆಯ ತಂತಿಯನ್ನು ಮಧುರವಾಗಿ ಮಿಡಿಯುತ್ತಾನೆ. ಅದು ನಾದೋಪಾಸನೆಯೂ ಹೌದು, ಭಗವಂತನ ಸಗುಣೋಪಾಸನೆಯೂ ಹೌದು. ಆ ಹತ್ತು ದಿನಗಳು ಹಾಡಿನ ಹೊನಲೇ ಹರಿಯುತ್ತದೆ. ಈ ನಾದ ಮಾಧು ರ್ಯಕ್ಕೆ, ಸ್ತೋತ್ರದಲ್ಲಿ ಅಡಗಿರುವ ಭಾವನಾ ಜೇನಿಗೆ ಭಗವಂತನ ಬಾಯಿ ನೀರೂರದೆ ಇರಲಾರದು. ಅಂದು ಆತನು ತನ್ನ ಭಕ್ತರ ಬಗೆಗೆ ಕೃಪಣನಾಗಲು ಸಾಧ್ಯವೇ ಇಲ್ಲ. ಇದನ್ನೇ ಅಧ್ಯಯನೋತ್ಸವ (ಅಧಿ=ಮೇಲೆ ಅಯನ= ಹೋಗುವುದು) ಎನ್ನುತ್ತಾರೆ.

## ಮೋಕ್ಷೋತ್ಸವ

ಶುದ್ಧ ಏಕಾದಶಿಯಿಂದ ಬಹುಳ ಪಂಚಮಿವರಗೆ 10 ದಿನಗಳ ಕಾಲ ನಡೆಯುವ ಉತ್ಸವಕ್ಕೆ ಮೋಕ್ಷೋತ್ಸವವೆಂದು ಕರೆಯುತ್ತಾರೆ. ಅಧ್ಯಯ ನೋತ್ಸವವನ್ನು ಹಗಲು ಹೊತ್ತು ನಡೆಯಿಸಿದರೆ, ಮೋಕ್ಷೋತ್ಸವವನ್ನು ರಾತ್ರಿ ಹೊತ್ತು ನಡೆಯಿಸಲಾಗುವುದು. ಏಕಾದಶಿಯ ದಿವಸ ಉಷಃ ಕಾಲದಲ್ಲೇ ನಿತ್ಯಪೂಜೆ ಮುಗಿಸಿ, ಭಗವಂತನಿಗೆ ಉತ್ತರ ದ್ವಾರದ ಹತ್ತಿರ ಶ್ರಮಪರಿಹಾರ ಕ್ಕಾಗಿ ಅರ್ಘ್ಯಪಾದ್ಯಗಳನ್ನು ಇತ್ತು ಉಪಚರಿಸಿ, ಸ್ತೋತ್ರಗಳಿಂದ ಸ್ತುತಿಸಿ, ವೇದಗಳನ್ನು ಹಾಡಿ, ಭಕ್ತರು ಆಶೀರ್ವಾದ ಪಡೆಯುವರು. ಈ ಉತ್ಸವದಲ್ಲಿ ಆಳ್ವಾರರ ಪ್ರವೇಶ; ನಾಥಮುನಿಗಳ, ರಾಮಾನುಜರ, ಭಟ್ಟರ, ಮಣವಾಳ ಮಾಮುನಿಗಳ ಸೇವೆಯು ಬಹು ಪ್ರಾಮುಖ್ಯವಾದ ಕಾರ್ಯಕ್ರಮಗಳು.

**ತಿರುನೆಡುಂತಾಂಡಕ :**— "ತಿರುನೆಡುಂತಾಂಡಕ" ಉತ್ಸವವನ್ನು ಅಧ್ಯಯನೋತ್ಸವಕ್ಕೆ ಮುನ್ನಾದಿನದ ಅಮಾವಾಸ್ಯೆಯ ರಾತ್ರಿಯಂದು ನಡೆಯಿಸುವುದು ಸಂಪ್ರದಾಯ. ಈ ಸಂಜೆ ಭಗವಂತನಿಗೆ ಕ್ಷೀರಾನ್ನವನ್ನು ನೈವೇದ್ಯವಾಗಿ ನಿವೇದಿಸುವರು.

ಕುಲಾಯಿ ಧರಿಸಿದ **ಅರೆಯರ್** (ಹಾಡುವವರು)ರವರಿಂದ "ಅರುಳಪಾಟ" ಸೇವೆ ನಡೆಯುವುದು. ಅರೆಯರ್‌ರವರಿಗೆ ನಂತರ **ಸ್ಥಾನೀಕರು** ತೀರ್ಥ, ಚಂದನ, ತೊಂಗುಪರಿವಟ್ಟು, ಮಾಲೆ, ಮೊದಲಾದ ಪ್ರಸಾದವನ್ನು ನೀಡುವರು. ನಂತರ ಅರ್ಚಕರು ಶ್ರೀ ಶಠಕೋಪವನ್ನು ನಿವೇದಿಸುವರು. "ಪ್ರೊಂಜ್ಞ ಶೀರ್ವಚನ ಭೂಷಣ ಮೀನ್ದ ವುಲಕಾರಿಯನ್ ಪ್ರೋತ್ತಿಡತ್ತಿಗಳುಂ ಪೆರುಮಾಳ್ ಪೋದಮಣವಾಳ ಮಾಮುನಿ ಈಡುರ್ರೈಪ್ಪದು ಕೇಟ್ಟು ಪೂರಿತ್ತು ನಿನ್ನ ಪೆರುಮಾಳ್' ಎಂದು ಮೊದಲಾಗುವ ಹೊಗಳಿಕೆಯ ಸ್ತೋತ್ರವನ್ನು ಹೇಳಿ "ತಿರುನೆಡುಂತಾಂಡಕದ" ಮೊದಲನೆ ಪಾಶುರ (ಪದ್ಯ, ಅಥವ ಚರಣ, ಅಥವ ಪ್ರಬಂಧ) ವಾದ "ಮಿನ್ನುರುವಾಯ್" ಅನ್ನು ಹಲವು ಸಾರಿ ಇರ್ರೈ ಗಾನದಲ್ಲಿ ಸೇವಿಸುವರು. ಆಗ ಭಕ್ತರ ಕೋರಿಕೆಯ ಸ್ಪಂದನಗಳು ಈ ಪ್ರಬಂಧಗಳಲ್ಲಿ ಮಿಡಿಯುವುವು. ಈ ಪಾಶುರವನ್ನು ಮುಗಿಸಿದ ನಂತರ ಮಧುಪರ್ಕವನ್ನು ಅರೆಯರ್‌ರವರೇ ಭಕ್ತಗೋಷ್ಠಿಗೆ ವಿನಿಯೋಗ ಮಾಡುವದು.

ಅನಂತರ "ಸ್ಥಳತ್ತಾರ್ಲ್ಲು" ರವರು ಮೊದಲುಗೊಂಡು ಹೊರಗೆ ಬಂದು ಅಳಗಿಯ ಮಣವಾಳ್ಅ ತಿರು ಮಂಟಪಕ್ಕೆ ಬಂದು, ಗೋಷ್ಠಿ ಸೇರುವರು. ಅಲ್ಲಿ ಅರೆಯರ್‌ರವರು, ಸನ್ನಿಧಿ ಗರುಡನಿಗೆ ಎದುರಾಗಿ ನಿಂತು ಭಗವಂತನನ್ನು ನೋಡಿಕೊಂಡು, ಹೊಗಳಿಕೆಯನ್ನು ಹೇಳಿ, "ಮಿನ್ನುರುವಾಯ್" ಪಾಶುರವನ್ನು ಹಾಡುತ್ತಾ ಅಭಿನಯಿಸುವರು. ಆಸಂದರ್ಭದಲ್ಲಿ ಭಕ್ತವೃಂದವು ನಿಂತಿದ್ದು, ನಂತರ ಕೂಡುವುದು. ಆಗ "ತಿರುನೆಡುಂತಾಂಡಕ" ವ್ಯಾಖ್ಯಾನ, ಮೊದಲನೆ ಪಾಶುರಕ್ಕೆ ಪೆರಿಯವಾಚ್ಚಾನ್ಪಿಳ್ಳೈರವರ ವ್ಯಾಖ್ಯಾನ, ಅವತಾರಿಕೆ, ಮೊದಲನೆ ಪಾಶುರದಿಂದ 11ನೇ ಪಾಶುರದವರಗೆ 'ಪಟ್ಟುಡುಕ್ಕುಂ' ಎನ್ನುವವರೆಗೆ ತಂಬಿರ್ರಾಮಾರ್‌ರವರ ವ್ಯಾಖ್ಯಾನವು ಜರುಗುವುದು. ಅರೆಯರ್ ರವರೇ ವ್ಯಾಖ್ಯಾನವನ್ನು (ಕಂಠಪಾಠ ಮಾಡಿರುವುದರಿಂದ) ಸೇವಿಸುವರು.

ಬೇರೊಬ್ಬರು ಪಕ್ಕದಿಂದ ಶ್ರೀ ಕೋಶವನ್ನು ಕೋರಿಸುವರು. ಮೊದಲನೆ ಪಾಶುರಕ್ಕೆ ಪೆರಿಯವಾಚ್ಚಾನ್ ಪಿಳ್ಳೈರವರ ವ್ಯಾಖ್ಯಾನವಾದ ಮೇಲೆ,ತಿರುಮಂಗೈ ಆಳ್ವಾರರ ಸೇವೆ, ಅನಂತರ ತಂಬಿರ್ರಾಪಡಿ ವ್ಯಾಖ್ಯಾನವು ನಡೆದು ಸೇವೆಯು ಮುಗಿಯುವುದು.

ನಂತರ ಭಗವಂತನಿಗೆ ನೈವೇದ್ಯ, ವೇದಬಿನ್ನಹ, ಘಟದೀಪ, ಮೊದಲಾದವುಗಳೊಡನೆ ಸೇವೆ ನೆರವೇರಿಸುವರು. ನಂತರ ಸ್ಥಳತ್ತಾರ್ದ್ಲು, ಆಚಾರ್ಯ ಪುರುಷರವರಿಗೆ ಮೊದಲು ತೀರ್ಥ ವಿನಿಯೋಗ, ನಂತರ ಇತರರಿಗೆ ತೀರ್ಥ ಪ್ರಸಾದ ವಿನಿಯೋಗವಾದ ನಂತರ ''ತಿರುನೆಡುಂತಾಂಡಕ ಉತ್ಸವ"ವು ಮುಗಿಯುವುದು. ತಿರುಮಂಗೈ ಆಳ್ವಾರರಿಗೆ "ವಿಟ್ಟಮು" ಎನ್ನುವ ಪ್ರಸಾದವನ್ನು ಕಳುಹಿಸಿ, ಅರ್ಚಕರಿಂದ ನೈವೇದ್ಯ ಮಾಡಿಸಲಾಗುವುದು.

ಹೀಗೆ **ವೈಕುಂಠ ಏಕಾದಶೀ** ಉತ್ಸವವು ಪ್ರಾರಂಭವಾಗುವುದು. ಭಕ್ತರ ಹೃದಯ ಹೂವಿನಂತೆ ಅರಳಿ, ಅವನ ಪಾದಾರವಿಂದದಡಿಯಲ್ಲಿ ಅರ್ಪಿತವಾಗಲು ಅಣಿಯಾಗುವುದು.

## ತಿರುಪ್ಪಳ್ಳಿ ಯೆಳುಚ್ಚಿ

ಧನುರ್ಮಾಸದ ಕಾಲದಲ್ಲಿ ಆರಾಧನೆಯು ಸೂರ್ಯೋದಯಕ್ಕೆ ಮುಂಚೆಯೇ ಮುಗಿದಿರುವುದು. ದೇವರ **ತಿರುಮಂಜನಕ್ಕೆ** (ಶ್ರೇಷ್ಠ ಸ್ನಾನ) ಮೊದಲಿನಂತೆ ಕಾವೇರಿಯಿಂದ ಪವಿತ್ರ ತೀರ್ಥ ತರಲಾಗುವುದಿಲ್ಲ. ಮೊದಲನೇ ದಿನವೇ ತೀರ್ಥವನ್ನು ಪೂರ್ಣ ಕುಂಭದಲ್ಲಿ ತಂದು ಶೇಖರಿಸಲಾಗಿರುವುದು. ಬೆಳಿಗ್ಗೆ ಸನ್ನಿಧಿಯ ಬಾಗಿಲು ತೆರೆಯಲಾಗುವುದು. ಅರೆಯರ್‌ರವರು ಬಂದು **ತಿರುಪಳ್ಳಿ ಯೆಳುಚ್ಚಿ** ಗಾನವನ್ನು ಸೇವಿಸುವರು. ನಂತರ **ತಿರುಪ್ಪಾವೈ** ಸೇವಿಸುವರು. ಇದರಿಂದ ಕಾರ್ಯಕ್ರಮವು ಪ್ರಾರಂಭವಾಗುವುದು. ನಂತರ ಚಾ(ಶಾ)ತ್ತುಮುರ್ರೈ ನಡೆಯುವುದು. ಪ್ರತಿ ದಿನವೂ ಒಂದೊಂದರಂತೆ 30 ದಿನಗಳು ಕ್ರಮವಾಗಿ **ನಾಳ್ ಪಟ್ಟು** ಸೇವೆ ನಡೆಯುವುದು. ಭಟ್ಟರಿಂದ ವೇದಬಿನ್ನಹ, ಅರುಳಪಾಟ, ಪುರಾಣ ಪಾಠ, ಘಟದೀಪ ಸೇವೆ, ತಿರುಪ್ಪಳ್ಳಿಯೆಳುಚ್ಚಿ, ಪ್ರಸಾದ ನಿವೇದನೆ, ಇತ್ಯಾದಿ

ಜರುಗುವುವು. ಉಡಯವರ್ (ರಾಮಾನುಜರು) ರವರಿಗೆ ವಿಶಿಷ್ಟ ರೀತಿಯ ಅರ್ಚನೆ ನಡೆಯುವುದು. ಧನುರ್ಮಾಸ ಕಾಲದಲ್ಲಿ ಪ್ರತಿ ದಿನವೂ ಶ್ರೀರಂಗ ನಾಥನಿಗೆ ಸೇವೆ ನಡೆದಂತೆಯೇ, ನಾಚ್ಚಿಯಾರ್, ಸುದರ್ಶನಾಳ್ವಾನ್, ಕಾಟ್ಟಳಗಿಯ ಶಿಂಗರ್‌ರವರ ಸನ್ನಿಧಿಯಲ್ಲಿ ಸೂರ್ಯೋದಯಕ್ಕೆ ಮೊದಲೇ ಪೂಜೆಯು ಮುಗಿದಿರುವುದು. ಈ ಮೂರೂ ಸನ್ನಿಧಿಗಳ ಪ್ರಸಾದವನ್ನು ನಂಬಿಳ್ಳ ಗೋಷ್ಠಿ ಸೇರಿದ ಎಡೆಯಲ್ಲಿ ಪ್ರಸಾದ ವಿನಿಯೋಗ ನಡೆಯುವುದು.

## ತಿರುಮೊಳಿತ್ತಿರುನಾಳ್

ಹಗಲು ಹೊತ್ತು ನಡೆಯುವ "ತಿರುಮೊಳಿತ್ತಿರುನಾಳ್" ಉತ್ಸವದಲ್ಲಿ 13 ಮುಖ್ಯ ಕಾರ್ಯಕ್ರಮಗಳು ಇರುವುವು :— 1) ಅರ್ಚಾವತಾರಿ ಭಗವಂತನು ಹೊರಗೆ ದಯಮಾಡಿಸುವುದು, 2) ಆಳ್ವಾರರಿಗೂ, ಆಚಾರ್ಯರಿಗೂ ಮರ್ಯಾದೆ, 3) ಅರೆಯರ್‌ರವರ ಸೇವೆ, 4) ತಿರುವಾರಾಧನೆ (ತಿರು= ಶ್ರೇಷ್ಠವಾದ, ಆರಾಧನೆ=ಪೂಜೆ) ಮತ್ತು ತೀರ್ಥ ವಿನಿಯೋಗ, 5) ಸ್ತೋತ್ರ ಪಾಠ ಗೋಷ್ಠಿ, 6) ಮಂಟಪದಿಂದ ಹೊರಗೆ ಬಿಜಮಾಡಿಸುವುದು, 7) ಅರ್ಘ್ಯ, ಪಾದ್ಯ ನಿವೇದನೆ, 8) ತೀರ್ಥ ವಿನಿಯೋಗ, 9) ಗತಿ ವೈಚಿತ್ರ್ಯ 10) ಪಡಿಯೇತ್ತಮು, 11) ತಿರುವಂದಿಕಾಪು, 12) ಒಳಗೆ ಬಿಜ ಮಾಡಿಸುವುದು, 13) ಎರಡನೇ ಅರೆಯರ್‌ರವರ ಸೇವೆ, ಇತ್ಯಾದಿ ಕಾರ್ಯಕ್ರಮಗಳು ಇರುವುವು.

ಹಿರಿಯ ನೈವೇದ್ಯವಾದ ನಂತರ, ಆಳ್ವಾರರು ಮತ್ತು ಆಚಾರ್ಯರು ಹೊರಗೆ ದಯಮಾಡಿಸಿ, ಹಗಲು ಹೊತ್ತು ಮಂಟಪದಲ್ಲಿರುವರು. ನಮ್ಮಾಳ್ವಾರರು ತಿರುಮಂಗೈ ಆಳ್ವಾರರು, ಉಡಯವರ್‌ರವರು ಪ್ರಮುಖ ಸ್ಥಾನದಲ್ಲಿರುವರು. **ಅರುಳಪಾಟ** ಜರುಗುವುದು. ಉತ್ಸವ ಮೂರ್ತಿಯು ಒಳಗೆ ದಯಮಾಡಿಸುವಾಗ :—

(1) ಪೆರುಮಾಳ್ಳನು ವೇಂಚೇಪು ಚೇಯುವಾರು ವದಿಯಾರುಗುರುನು 'ನಾಯಿಂವೇ, ನಾಯಿಂದೆ' ಅನಿ ಚೆಪ್ಪುಚು; ಲೋಪಲ ಪೋವುದುರು. ತಲುಪು ಮೂಸಿ ತೆರಚಿನಪುಡು ಪೆರುಮಾಳ್ ಶ್ರೀಪಾದತಾಂಗುವಾರ್ಲ ಭುಜಮುನುಂಡಿ ಸೇವ ಸಾಯಿಂತುರು.

"ಈ ಉತ್ಸವಮಂತಯು ಪೆರುಮಾಳ್ ರೋಜುಕೊಕವಿಧವ್ಯೆನ "ಕಪಾಯಿ'' (ಅಂಗಿ), ದಾನಿಮೀದ ಪಲುವಿಧ ಆಭರಣಮುಲು, ಕಿರೀಟಮು ಲೇಕ ಕುಲ್ಲಾಯಿ, ಶವ್ರಿ ಮುಡಿ ರಾಜ ಮುಡಿ ಧರಿಂತುರು. ತಲುಪು ತೆರಚಿ ಪೆರುಮಾಳ್ಳು ಸೇವ ಸಾಯಿಂಚಗನೇ ಚಾತಾನಿ ವೈಷ್ಣವಲಿದ್ದರು ವೇತ್ರಪಾಣುಲುಗನುಂಡಿ ಒಕರಿಕ ನಂತರಮೊಕರುಗ :—

*ಮನ್ನಿಯಶೀರ್ ಮಣವಾಳ ಮಾಮುನಿವನ್ ಈಡುಗರದು, ಪಿನ್ನೋರು ಶ್ರೀ ಶೈಲೇಶ ಎನ ಪೇಶುಮ ರಂಗಾ ! ಎಚ್ಚರಿಕ ! ಅನು ಮೊದಲುಗು ಕಟ್ಟೆಯಮುಲನು ಚೆಪ್ಪುದುರು. ಪೆರುಮಾಳ್ ದ್ವಾರಮು ದಾಟಿ ಬಯಟರಾಗನೇ ಮೇಲಪ್ಪಡಿಲೋ ಗೋಷ್ಠಿಗನುಂಡು ಸ್ಥಲತ್ತಾರ್ಲು, ಆಚಾರ್ಯ ಪುರುಷುಲು, ತೀರ್ಥಕಾರ್ಲು, ದಂಡಂ ಸಮರ್ಪಿಂತುರು". ಈ ರೀತಿಯಲ್ಲಿ ಅಂದಿನ ಉತ್ಸವದಲ್ಲಿ ಶಾತ್ತಾದ ಶ್ರೀವೈಷ್ಣವರ ಸೇವೆ ಪ್ರಾರಂಭವಾಗುವುದು.

ಈ ಹಿಂದೆ ಹೇಳಿದ ಏಳನೇ ಕಾರ್ಯಕ್ರಮದಂತೆ ಅರ್ಘ್ಯಪಾದ್ಯ ಸೇವೆಯಲ್ಲಿ :—

"(2) ವಟ್ಟಿಲ್ ಪಿಡಿತ್ತೀಲ್, ತಿರುಕ್ಕರಗಕ್ಕೈಯೇಲ್, ಸುಂದರ ಪಾಂಡಿಯಂ ಪಿಡಿತ್ತೇಲ್"—ಅನಿ ಅರುಳಪಾಟು ಸಾಯಿಂಚಿಗ, ಕೈಂಕರ್ಯ

1. ಶ್ರೀರಂಗಂ ವೈಕುಂಠ ಏಕಾದಶಿ ಅಧ್ಯಯನೋತ್ಸವಮು — ಕರ್ತೃ ಸ್ಥಾನೀಕಂ ಪಾರ್ಥಸಾರಥಿ ಅಯ್ಯಂಗಾರ್. 1952—ಪುಟ 14. *ರಾಮಾನುಜರ ನಂತರ ಜನಿಸಿದ ಮಣವಾಳ ಮಹಾಮುನಿಗಳು ಪಿಳ್ಳೈ ಲೋಕಾಚಾರ್ಯರಂತೆಯೇ ಒಬ್ಬ ದೊಡ್ಡ ಆಚಾರ್ಯರು. ಅಳಗಿಯ ಮಣವಾಳ ಎಂದು ಉತ್ಸವ ಮೂರ್ತಿಗೆ ಬೇರೊಂದು ಹೆಸರೂ—ಇದೆ. 2. ಪುಟ 18.

ಪರಲು, **ಇದೋ ವರುದೇ** ಅನಿ ಜವಾಬು ಚೆಪ್ಪುಕೊನಿ, ಆಯಾ ಪಾತ್ರಮುಲನು ಪೆರುಮಾಳ್ಳ ದಗ್ಗರ ತೆಚ್ಚಿದರು. ಅನಂತರಮು—"ಅರುಳಪ್ಪಾಡು ವೇತ್ರಪಾಣಿ"—ಅನಗ, **ಜಾತಾನಿ ವೈಷ್ಣವುಡು ವೇತ್ರ ಹಸ್ತುಡೈ (ಬೆತ್ತ) ದಗ್ಗರವಚ್ಚಿ, ಕಟ್ಟಿಯಮು, ಅರ್ಘ್ಯಪಾದ್ಯಮುಲು ಸಮರ್ಪಿಂಚು ವರಕು ಚೆಪ್ಪುನು''**. ಹೀಗೆ ಇಲ್ಲಿ ಇವರ ಸೇವೆ ಇರುವುದು. ಒಂಭತ್ತನೇ ಕಾರ್ಯಕ್ರಮವಾದ "ಗತಿ ವೈಚಿತ್ರ್ಯಮು" ಎನ್ನುವ ಕಾರ್ಯಕ್ರಮದಲ್ಲಿ ;— **ಕಂದಾಡೈ ರಾಮಾನುಜಯ್ಯಂಗಾರ್‌ರವರ ಸೇವೆಗೆ ಮರ್ಯಾದೆ ಸಲ್ಲಿಸುವ ಕಾರ್ಯಕ್ರಮವೂ ಇದೆ :—**

"ಮಣೆಯಗಾರ್ಲನು **ಕಂದಾಡ ರಾಮಾನುಜನುನ್ನು** ಸೇವ ಮರ್ಯಾದಲು ಪುಚ್ಚುಕೊನಿನ ತರುವಾತ—"ಶಾರೀಯೋಂ"–ಅನಿ ಅರುಳಪಾಟಯಿ, ಪೆರುಮಾಳ್ಳು ಒಯ್ಯಾರ ನಡಲೋ ಪೋಯಿ, ಯಾಗಶಾಲ ದಗ್ಗರ ಅತಿವೇಗಮುಗ ತಿರಿಗಿ, ಮರಲ ಒಯ್ಯಾರ ನಡಲೋನೇ ವಚ್ಚಿ, ಕರುಕೂಲಮು ದಗ್ಗರ ಅತಿವೇಗಮುಗ ತಿರಿಗಿ, ಮಂಡಪಮುಲೋ ನಿಲುಚುದುರು".

ಹೀಗೆ ಅರ್ಚಾವತಾರಿಯಾದ ಪರಮಾತ್ಮನು ವೃಷಭದಂತೆ **ವಯ್ಯಾರ** ನಡಿಗೆ, ಸಿಂಹ ನಡಿಗೆ, ಮತ್ತಗಜ ನಡಿಗೆ, ಸರ್ಪ ನಡಿಗೆಯಲ್ಲಿ ಮಂದಿರದಲ್ಲಿ ಓಡಾಡುವನು. ಇಂತಹ ಗತಿವೈಭವ (ನಡಿಗೆ ವೈಭವ ಸೇವೆಯ ಉತ್ಸವ) ಕಾರ್ಯದಲ್ಲಿ **ಕಂದಾಡೈ ರಾಮಾನುಜಯ್ಯಂಗಾರ್**‌ರವರ ಸೇವೆಯ ಸ್ಮರಣೆಯೂ ನಡೆಯುವುದು.

ಈ ವೈಕುಂಠ ಏಕಾದಶಿ ಉತ್ಸವವನ್ನು ಮುಖ್ಯವಾಗಿ ಹೀಗೆ ವಿಂಗಡಿಸಬಹುದು :—

ಒಂದನೇ ಉತ್ಸವ–ತಿರುಪಳ್ಳಿಯೆಳುಚ್ಚಿ. ಎರಡನೇ ಉತ್ಸವ–ಹಗಲು ಹೊತ್ತಿನ ತಿರುಮೊಳಿತ್ತಿರುನಾಳ್. ಮೂರನೇ ಉತ್ಸವ–ಹಗಲು ಹೊತ್ತಿನ ಮೋಹನಾವತಾರ. ನಾಲ್ಕನೇ ಉತ್ಸವ–ಹಗಲು ಹೊತ್ತಿನ ಅರೆಯರ್‌ರ ಸೇವೆ. ಐದನೇ ಉತ್ಸವ–ತಿರುವಾಯಿಮೊಳಿತ್ತಿರುನಾಳ್. ಆರನೇ ಉತ್ಸವ–ಅಹೋಬಿಲ

ಮಠ ಸೇವೆ. ಏಳನೇ ಉತ್ಸವ–ತಿರುಕ್ಕೈತ್ತಲ ಸೇವೆ. ಎಂಟನೇ ಉತ್ಸವ–ಪಾರಿಪೇಟ. ಒಂಭತ್ತನೇ ಉತ್ಸವ–ವೀಣೆಯ ಸಂಗೀತ ಸೇವೆ ಉತ್ಸವ. ಹತ್ತನೇ ಉತ್ಸವ–ಚಕ್ರತೀರ್ಥ, ಬ್ರಹ್ಮರಥ, ತಿರುಮಂಜನ, ಅರೆಯರ್ ಸೇವೆ, ಆಳ್ವಾರರಿಗೆ ಮೋಕ್ಷ, ಹೊರಗೆ ಉತ್ಸವ, ಇತ್ಯಾದಿ. ಹನ್ನೊಂದನೇ ಉತ್ಸವ–ಇಯಲ್ಪಾ ಚಾತ್ತುಮೊರೈ ಸೇವೆ ಇತ್ಯಾದಿ ಉತ್ಸವಗಳು ಇರುವುವು.

"(1) ಪೆರುಮಾಳ್ಳು ಬಯಲುದೇರಿ, ಮೇಲಪ್ಪಡಿಯೊದ್ದ ಸ್ಥಲತ್ತಾರ್ಲು ಮೊದಲಗು ವಾರ್ಲಕು ಮರ್ಯಾದ ಚೇಯಿಂಚಿ, ಉತ್ತಮ ನಂಬಿಕಿ ಪರಿವಟ್ಟಮು ಸಾಯಿಂಚಿ. ಕ್ರಿಂದಿಕಿ ದಿಗಿ, ಉತ್ತರಮುಗ ತಿರುಗುದುರು. "ಅರುಳಪ್ಪಾಡು ತಿರುವರಂಗಂ ಕೂಟ್ಟತ್ತಾರ್"—ಅನಿ ಅರುಳಪಾಟಗುನು. ತಿರುವರಂಗಂ ಕೂಟತ್ತಾರ್ಲಗು ಉತ್ತಮನಂಬಿ ವಂಶ್ಯುಲು, ತಿರುವರಂಗತ್ತಮುದನಾರ್ ವಂಶ್ಯುಲು, ಅಳಗಿಯ ಮಣವಾಳ ಸಭವಾರು, ಭಟ್ಟರುವಾರಿ ಶಿಷ್ಯುಲು, ವಾಧೂಲ ದೇಶಿಕುಲವಾರಿ ಶಿಷ್ಯುಲುನ್ನು–ಅಮುದನಾರ್ಲವಾರಿ ಮನಮುಡಗು ಪಿಳ್ಳ ಪೆರುಮಾಳಯ್ಯಂಗಾರ್ ಸಾದಿಂಚಿನ ಪಾಶುರಮುಲನು ಸೇವಿಂಚುದುರು. ಪೆರುಮಾಳ್ಳು ರೆಂಡಡುಗುಲ ದೂರಮು ಪೋಗಾನೇ "ತಿರುಕ್ಕುರುಗೂರ್ ದಾಸರ್", "ತಿರುನರೈಯೂರ್ ದಾಸರ್" ಅನಿಚೆಪ್ಪಿ, **ಪೆರುಮಾಳ್ಳ ಪಟ್ಟು ಗುಡ್ಡನುಂಡಿ ರೆಂಡು ನೂಲುಲನೆತ್ತಿ ಚಾತಾನಿ ವೈಷ್ಣವುಲ ತಲತೋ ಲಾಲಿಂಚ ಬಡುನು.** ಮಣವಾಳ ಮಾಮುನುಲು ಚಿತ್ರರೂಪಮುಗ ವೇಂಚೇಸಿಯುಂಡುಚೋಟ ಆಯನಾರ್ಲಕು "ತಿರುಕ್ಕುರುಗೂರ್ ದಾಸರ್" ಅನಿ ಚೆಪ್ಪಿ 'ಲಾಲಿ' ಸಾದಿಂಪ ಬಡುನು"

ಈ ಮೇಲೆ ಕಂಡ ಸೇವೆಯು "ಪರಮಪದ ದ್ವಾರ"ದ ಬಳಿ ನಡೆಯುವ ಸೇವೆಯಾಗಿರುತ್ತದೆ.

"(2) (ತಿರುವಾಯಿಮೊಳಿ)................ಪಾಶುರಮು ಪೂರ್ತಿ ಅಯಿನ ತರುವಾತ "ಶಾರೀಯೋಂ" ಅನಿ ಅರುಳಪಾಟಯಿ, ಪೆರುಮಾಳ್ಳು ಒಯ್ಯಾರ

1. ಶ್ರೀರಂಗಂ ವೈಕುಂಠ ಏಕಾದಶಿ ಅಧ್ಯಯನೋತ್ಸವಮು. ಪುಟ 31–32.
2. ಶ್ರೀರಂಗಂ ವೈಕುಂಠ ಏಕಾದಶಿ ಅಧ್ಯಯನೋತ್ಸವಮು. ಪುಟ 34—35.

ನಡಲೋ ಎದುರುಗನುಂಡು ಮಂಡಪಮು ವರಕು ಪೋಯಿ ತಿರಿಗಿ, ಮರಲ ದಕ್ಷಿಣ ಮುಗ ಸಗಂ ದೂರಮು ಪೋವುದುರು. ಅಚ್ಚಟಿ ಅರಯರ್ಲಕುನ್ನು (ದಾಸೀಲಕುನ್ನು) ಅರುಳಪಾಟಯಿ, ಪಡಿಯೇತ್ತ ಕೊಂಡಾಟಮುಲತೋ ಮಂಡಪಮೆಕ್ಕಿ, **ಪುಂಡರೀಕ ದಾಸರ್, ಶಠಕೋಪ ದಾಸರ್—ಅನಿ ಚೆಪ್ಪಿ ಚಾತಾನುಲಕು ರೆಂಡು ನೂಲುಲು "ಲಾಲಿ" ಸಮರ್ಪಿಂಚಿ,** ವೆಯಿ ಕಾಳ್ಳು (ನೂರುಕಾಲು) ಮಂಡಪಮು ಮಧ್ಯಾಂಗಣಮುಲೋ ವೇಂಚೇಸಿಯುಂಡು ಆಳ್ವಾರ್ ಆಚಾರ್ಯಲಕು ತಮ ಒಯ್ಯಾರ ನಡನು ಚೂಪಿಂಚುಕೊನಿ, ಮಧ್ಯಾಂಗಣಮುಯೊಕ್ಕ ದಕ್ಷಿಣ ಕೋಟಿಕಿ ಪೋಯಿ ತಿರುಗುದುರು. ಅಚ್ಚಟಿ ತಿರುವಂದಿ ಕಾಪಯಿ ಪೆರುಮಾಳ್ಳು ತಿರುಮಾಮಣಿ ಮಂಡಪಮು ವೇಂಚೇಯು ದುರು". ಈ ಸೇವೆ ಕೋಟೆಯಲ್ಲಿ ನಡೆಯುವ ಸೇವೆಯಾಗಿರುತ್ತವೆ.

(1) "ಪೆರುಮಾಳ್ಳು ಲೋಪಲಪೋಯಿ ಪಡಮಟಿ ತಿರುಗ, ಅಚ್ಚಟಿ ನುಂಡಿ ವೀಣ ವಾಯಿಂಚುಟ, (ದೇವದಾಸೀಲು ಚೂಪಿಂಚು ಅಭಿನಯಮು ತೋನು) ನಟ್ಟುವಡುಚೇಯು ಸ್ವರಾಲಾಪಮುತೋನು, ತಾಳಮೃದಂಗಮುಲ ತೋನು, ವೀಣಮಿರಾಸಿದಾರು ಸ್ವಾಮುಲು ಚೇಯು ವೀಣಗಾನಮುತೋನು, **ಚಾತಾನಿ ವೈಷ್ಣವುಲು "ಎಚ್ಚರಿಕ" ಅನು ಘೋಷಿಂಚಿ,** ಜಲ್ಲುಚುಂಡು ಪಚ್ಚಕರ್ಪೂರ ಪೊಡಿ ಕಲಿಪಿನ ಪುಷ್ಪವಳಮುಲತೋನು ಪೆರುಮಾಳ್ಳು ಮೇಲ ಪ್ಪಡಿ ಪೋಯಿ, ವೀಣಗಾನಮುತೋನೇ ಪಡಿಯೇತ್ತಮನುಭವಿಂಚಿ, ನೇರುಗಾ ಲೋಪಲ ವೇಂಚೇಯುದುರು". ಈ ಸೇವೆ, ವೀಣ ಏಕಾಂತ ಸೇವೆಯಲ್ಲಿ ಜರುಗುವುದು.

**ತಿರುಪ್ಪಾವೈಯನ್ನು ವೈಕುಂಠ ಏಕಾದಶಿಯ** ಉತ್ಸವದಲ್ಲಿ ಸೇವಿಸಿ ದಂತೆಯೇ ಸಂಕ್ರಾಂತಿಯ ದಿನ ತಿರುಪ್ಪಾವೈ ಸೇವೆಯನ್ನು ಸಹ ನಡೆಸಲಾಗು ವುದು. ಈ ಉತ್ಸವದ ಅಂಗವಾಗಿ ನೈವೇದ್ಯ, ಅರೆಯರ್‌ರವರು ತಾಳ ಸಮೇತ ಹಾಡುವ ಸೇವೆ ಜರುಗುವುದು.

---

1. ಶ್ರೀರಂಗಂ ವೈಕುಂಠ ಏಕಾದಶಿ ಅಧ್ಯಯನೋತ್ಸವಮು. ಪುಟ 36.

(1) "ಪಾಶುರಮುಲು ಪೂರ್ತಿಯಗುವರೆಕು ಪೆರುಮಾಳ್ಳು ತಿರುವಡುಲ ಯಂದು ಅರ್ಚಕುಲು ತುಲಸಿ ಸಮರ್ಪಿಂಚಿದುರು. ಅನಂತರಮು, ತುಲಸಿ ಮೊದಲೈನ ಪ್ರಸಾದಮುಲು ವಿನಿಯೋಗಮು ಚೇಯಬಡಿ, ಪೆರುಮಾಳ್ಳು ಲೋಪಲ ವೇಂಚೇಯುದುರು''.

**"ನೇಡು ಚಿಲಕಲಮಾಲ ಸಮರ್ಪಿಂಚಿನಂದುನ, ಚಾತಾನಿ ವೈಷ್ಣವುಡು ಗುಡಿನುಂಡಿ ವಿನುಗೆಮೀದ ನೆಕ್ಕಿ, ಸಕಲ ಬಿರುದುಲತೋ ಇಂಟಿಕಿ ಪಂಪಬಡುನು.** ರಾಪತ್ತು, ಲೇಕ ತೈ-ಬ್ರಹ್ಮೋತ್ಸವ ಮುಂಡಿನಯೆಡಲ, ಪೆರುಮಾಳ್ಳು ಶೀಘ್ರಮುಗ ಲೋಪಲ ವೇಂಚೇಸಿ, ಮರಲ ಆ ಯಾ ಉತ್ಸವ ಮುನಕು ಬಯಲುದೇರುದುರು".

ಈ ಉತ್ಸವಗಳ ಸಂದರ್ಭದಲ್ಲಿ **ಶಾತ್ತಾದ ಶ್ರೀ ವೈಷ್ಣವರು** ಬಹು ಪುರಾತನ ಕಾಲದಿಂದಲೂ ಸಲ್ಲಿಸುತ್ತಿರುವ ವಿಷಯದ ಒಂದು ಕಿರುನೋಟ ಕಾಣಿಸಲಾಗಿದೆ. ಹೆಚ್ಚಿನ ವಿವರಕ್ಕೆ ಪ್ರತ್ಯೇಕವಾದ ಅಧ್ಯಯನವು ಅಗತ್ಯ.

---

1. ಶ್ರೀರಂಗಂ ವೈಕುಂಠ ಏಕಾದಶಿ ಅಧ್ಯಯನೋತ್ಸವಮು. ಪುಟ 48.

ತಿರುಪತಿಯ ಶಿಲಾಶಾಸನಗಳಲ್ಲಿ ಶಾತ್ತಾದ ಶ್ರೀ ವೈಷ್ಣವರ ಉಲ್ಲೇಖ ಬರುವ ಎಲ್ಲ ಎಡೆಯಲ್ಲಿ, ಪೂರ್ಣವಾಗಿ "ಶಾತ್ತಾದ ಶ್ರೀ ವೈಷ್ಣವರೆಂದು" ಉಲ್ಲೇಖವಾಗಿರುವುದನ್ನು ಗಮನಿಸಬಹುದು. ಆದರೆ ಇತ್ತೀಚೆಗೆ ಅಚ್ಚಾದ ಕೆಲವು ಗ್ರಂಥಗಳಲ್ಲಿ, ಇಂತಹ ಸಂದರ್ಭದಲ್ಲಿ, "ಚಾತಾನಿ ವೈಷ್ಣವುಲು", ಚಾತಾನಿ ವೈಷ್ಣವುಡು, ಇತ್ಯಾದಿಯಾಗಿ ಸಂಬೋಧಿಸಿರುವುದನ್ನು, ಈ ಪದಪ್ರಯೋಗದಲ್ಲಿ ಮಧ್ಯದ 'ಶ್ರೀ' ಕಾರವು ಲುಪ್ತವಾಗಿರುವುದನ್ನು ಗಮನಿಸಬಹುದು.

ಆದರೆ ಈ "ಚಾತಾನಿ", "ಸಾತಾನಿ" ಪದ ಪ್ರಯೋಗಗಳು "ಶಾತ್ತನಿ'' ಪದಕ್ಕೆ ಅತಿ ಹತ್ತಿರವಾಗಿದ್ದು, "ಶಾತ್ತಾದ'' ಪದ ಪ್ರಯೋಗಕ್ಕೆ ದೂರವಾಗಿರುವುದನ್ನು ಗಮನಿಸ ಬಹುದು. ಇದರ ಬಗೆಗೂ ಹೆಚ್ಚಿನ ಸಂಶೋಧನೆ ಅಗತ್ಯ —ಸಂಪಾದಕ.

# ಇತಿಹಾಸ ಪರಿವರ್ತನೆ

ಇತಿಹಾಸವೆಂದರೆ, ಇತಿ–ಹ–ಆಸ–ಈ ರೀತಿ–ಇದು ಇತ್ತು–ಎಂದರ್ಥ.

ಆಳರಸರಾಗಿದ್ದ ಬ್ರಿಟಿಷರು–1857ರಲ್ಲಿ ಜರುಗಿದ ನಮ್ಮ ಪ್ರಥಮ ಸ್ವಾತಂತ್ರ ಹೋರಾಟವನ್ನು–ಸಿಪಾಯಿ ದಂಗೆ ಎಂದು ಕರೆದು, ಇತಿಹಾಸ ಬದಲಾಯಿಸಿದ ನೆನಪು ನಮ್ಮೆಲ್ಲರ ಮನಸ್ಸಿನಲ್ಲಿ ಮಾರ್ಮಿಕವಾಗಿ ಉಳಿದೇ ಇದೆ. ಅದರಂತೆ ಇಲ್ಲೂ ಅನೇಕ **ಇತಿಹಾಸ ಪರಿವರ್ತನೆಗಳು** ನಡೆದಿವೆ. ಕೆಲವನ್ನು ಮಾತ್ರ ಇಲ್ಲಿ ಉದಹರಿಸಲಾಗಿದೆ. ಬಾಲಕ ರಾಮಾನುಜಾಚಾರ್ಯರಿಗೆ ಆಚಾರ್ಯರಾಗಿದ್ದ **ಕಾಂಚೀಪೂರ್ಣರ** (ತಿರುಕ್ಕಚ್ಚಿನಂಬಿ) ಶಾಖೆಯ (ಮತ) ಬಗೆಗೆ ಅನೇಕ ಪಂಡಿತರು ಬೇರೆ ಬೇರೆ ಬಣ್ಣ ಬಳಿದಿದ್ದಾರೆ. ಇವರು **ಶಾತ್ತಾದ ಶ್ರೀ ವೈಷ್ಣವರೆಂದು ಚಿಕುಪಾಧ್ಯಾಯ ವಿರಚಿತ ದಿವ್ಯಸೂರಿ ಚರಿತೆ** ಸಾರಿ ಹೇಳುತ್ತದೆ. ಈ ಪುಸ್ತಕವು ಮಂ. ಆ. ರಾಮಾನುಜಯ್ಯಂಗಾರ್ ರವರಿಂದ ಪರಿಶೋಧಿಸಲ್ಪಟ್ಟು, ಮೈಸೂರಿನ ಜಿ.ಟಿ.ಎ. ಮುದ್ರಣ ಶಾಲೆಯಲ್ಲಿ 1911ರಲ್ಲಿ ಪ್ರಕಾಶಿತವಾಗಿದೆ. ಇದು ಕರ್ಣಾಟಕ ಕಾವ್ಯ ಕಲಾನಿಧಿ ಕೋಶದ ಸಂಖ್ಯೆ 33ರ ರಂತೆ ಅಚ್ಚಾಗಿ ಪ್ರಕಾಶಿತವಾದ ಗ್ರಂಥವಾಗಿದೆ.

**ಅವರ್ಗೆತಂದುದನಾಲಿಸುತ್ತವರ ಶಿಷ್ಯಂ ತಾಂ ತಿರುಕ್ಕಚ್ಚಿನಂ |**
**ಬಿವದಾನ್ಯಂ ವರದಂಗೆ ಬಿಜ್ಜಣದ ಸೇವಾಸಕ್ತ ಶಾತ್ತಾದ ವೈ ||**
**ಷ್ಣವನೊಳ್ಪಿಂದಿದಿರ್ವಂದು ಶ್ರೀ ವರದರಾಜ ಸ್ವಾಮಿಯಭ್ಯರ್ಣಕು |**
**ತ್ಸವದಿಂದ ಕರೆದುಯ್ದು ಮಾಡಿಸಿದನಾತಂಗಳ್ಗೆ ತತ್ಸೇವೆಯಂ ||**
(ಮತ್ತೇಭ ವಿಕ್ರೀಡಿತ ವೃತ್ತ–ದಶಮಾಶ್ವಾಸ–25ನೇ ಪದ್ಯ–ಪುಟ 83)

"ಯಾದವ ಪ್ರಕಾಶರು ತಮ್ಮ ನಿಜಾಶ್ರಮಕ್ಕೆ ಹೋಗಿ............ಕಾಂಚೀ ನಗರಕ್ಕೆ (ಯಾಮುನ) ಬಂದರು. ಅವರು ಬಂದುದನ್ನು ಕೇಳಿ ಅವರ ಪ್ರ–ಶಿಷ್ಯರಾದ ಕಾಂಚೀ ಪೂರ್ಣರು, ಯಾಮುನರನ್ನು ಎದುರುಗೊಂಡು ವರದರಾಜ ಸ್ವಾಮಿ ಹತ್ತಿರ ಕರೆದೊಯ್ದು ಸೇವೆ ಮಾಡಿಸಿದರು".

ಬಾಲಕ ರಾಮಾನುಜರಿಗೆ ಅವರ ತಾಯಿಯವರು ಒಂದು ದಿನ **ಕೈಂಕರ್ಯ ವಿಶೇಷದಿಂದೆ ತಿರುಕ್ಕಚ್ಚಿನಂಬಿ ಎಂಬ ಶ್ರೀ ವೈಷ್ಣವರ**

**ಅಂತರಂಗರಾಗಿರ್ಪ್ಪಂ ಅವರ್ ಪೇಳ್ದ ಬುದ್ಧಿಯನ್ನು ಅಂಗೀಕರಿಸಿ ಕೊಂಡಿರು** ಎಂಮ ಹೇಳುತ್ತಾರೆ. (ಪುಟ 87. ಆಶ್ವಾಸ 10.)

ಈ ಗ್ರಂಥದಲ್ಲಿ ರಾಮಾನುಜರ ಹೆಂಡತಿಯವರು ತಿರುಕ್ಕಚ್ಚನಂಬಿಗೆ ಊಟ ಬಡಿಸಿದ್ದು, ನಂತರ ಆಕೆ ಸ್ನಾನ ಮಾಡಿ ಮಡಿಯುಟ್ಟು, ತನ್ನ ಗಂಡನಿಗಾಗಿ ಮತ್ತೆ ಬೇರೆ ಅಡಿಗೆ ಮಾಡಿದ ಪ್ರಸಂಗವು ಇಲ್ಲಿ ಬರುವುದಿಲ್ಲ. ಆದ್ದರಿಂದ ಇತ್ತೀಚಿನ ಗ್ರಂಥಗಳಲ್ಲಿ ತಿರುಕ್ಕಚ್ಚಿನಂಬಿಗಳ ಜಾತಿ ಬಗೆಗೆ, ಭಿನ್ನ ಭಿನ್ನ ಗ್ರಂಥ ಕರ್ತರು ಭಿನ್ನ ಭಿನ್ನ ಅಭಿಪ್ರಾಯಪಟ್ಟಿರುವುದನ್ನು; ಪುನಃ ಪರಿಶೀಲಿಸಬೇಕಾದ ಅಂಶ. ಸ್ನಾನಾನಂತರ ಹೆಂಡತಿಯು ರಾಮಾನುಜರಿಗೆ ಮತ್ತೆ ಅಡಿಗೆ ಮಾಡಿದ ಕತೆ ನಿಜವೇ ಆಗಿದ್ದರೆ, ಯಾವ ನೈಜಕಾರಣದಿಂದ ಆಯಿತು ಎನ್ನುವುದರ ಬಗೆಗೆ ಸಂಶೋಧನೆ ನಡೆಯಬೇಕಾಗಿದೆ. ಅಲ್ಲದೆ ಇತಿಹಾಸದ ವಿಪರ್ಯಾಸವಾಗಿದೆಯೇ; ಆಗಿದ್ದರೆ, ಎಷ್ಟು ಎನ್ನುವುದನ್ನೂ ಪರಿಶೀಲಿಸಬೇಕಾಗಿದೆ.

ಈ ದಿವ್ಯ ಸೂರಿ ಚರಿತೆಯ ಗ್ರಂಥಕರ್ತೃ, ಯಜುಶ್ಶಾಖೆಯ ಪುರುಕುತ್ಸ ಗೋತ್ರದ ರಂಗಾಚಾರ್ಯರೆಂಬುವವರ ಮಕ್ಕಳು. ಮೈಸೂರಿನ ಚಿಕ್ಕದೇವ ರಾಜ ಒಡೆಯರ ಕಾಲದಲ್ಲಿ ಇವರೂ ಮಂತ್ರಿಗಳಾಗಿದ್ದರು. ಹಾಗೂ ಆಸ್ಥಾನ ಕವಿಗಳಾಗಿದ್ದರು. 1678ರಲ್ಲಿ ಕಾವ್ಯ ಬರೆದು ಮುಗಿಸಿದಂತೆ ಕಾಣುತ್ತದೆ. [ಗ್ರಂಥ ವಿಮರ್ಶಕರಂತೆ ಚಿಕ್ಕದೇವರಾಜ ಒಡೆಯರ್‌ರವರ ಕಾಲ ಕ್ರಿ ಶ.1672–1704. ಆದರೆ The Origin and Growth of Sri Brahma tantra Parakala Matt (ಮೈಸೂರು ನಗರ) by N. Desika-charya ರವರಂತೆ ಕ್ರಿ.ಶ 1673–1704].

ಅಲ್ಲದೆ "ವರದರಾಜಂಗೆ ಸರ್ವಾಂಶದಲ್ಲಿ........... ಅಂತರಂಗರಾಗಿ (**ತಿರುಕ್ಕಚ್ಚನಂಬಿ) ಯೆಂದು ಪೆಸರುಳ್ಳ ಶಾತ್ತಾದ ವೈಷ್ಣವರಿರ್ಪರದು** ಕಾರಣ ಅವರೊಡನೀ ವೃತ್ತಾಂತಮಂ ವಿಜ್ಞಾಪಿಸೆಂದು ಪೇಳಲಾಗಿ, ಮಾತೃವಾಕ್ಯ ಪರಿಪಾಲಕರಾದ ರಾಮಾನುಜರು ತ್ವರೆಯಿಂದ ತಿರುಕ್ಕಚ್ಚಿ ನಂಬಿಗಳ ಮಠವನೈದಿ" ಇತ್ಯಾದಿಯಾಗಿ ಕತೆ ಮುಂದುವರೆಯುತ್ತದೆ.

[ಕರ್ನಾಟಕ ಪ್ರಪನ್ನಾಮೃತವು. ಆರನೇ ಆಶ್ವಾಸವು]. ಹೀಗೆ ಅನೇಕ ಸಂದರ್ಭವಲ್ಲಿ ಇತಿಹಾಸ ಪರಿವರ್ತನೆಯಾಗಿರುವುದನ್ನು ಗಮನಿಸಬಹುದು.

## 19-20ನೇ ಶತಮಾನದಲ್ಲಿ

**ಶಾತ್ತಾದ ಶ್ರೀವೈಷ್ಣವರ** ಸಾಮಾಜಿಕ ಸ್ಥಾನಮಾನಗಳು ಕಾರಣಾಂತರ ಗಳಿಂದ ಇಳಿದುಹೋಗುತ್ತಿವೆ ಎನ್ನುವುದಕ್ಕೆ, ಹಲವು ಉದಾಹರಣೆಗಳನ್ನು ಕೊಡಬಹುದು.

ಅನಂತಪುರ ಜಿಲ್ಲೆಯ ಕದರಿಯಲ್ಲಿನ ಶ್ರೀ ಲಕ್ಷ್ಮೀನರಸಿಂಹಸ್ವಾಮಿಯವರ ಅರ್ಚನೆ, ಇತ್ತೀಚಿನವರೆವಿಗೂ **ಶಾತ್ತಾದ ಶ್ರೀ ವೈಷ್ಣವರಿಂದಲೇ** ನಡೆಯುತ್ತಿದ್ದುದು; ಸುಮಾರು 40-45 ವರುಷಗಳಿಂದ ಪರಿಸ್ಥಿತಿ ಬದಲಾಗಿ ಹೋಗಿದೆ ಎಂದು ತಿಳಿದು ಬಂದಿದೆ. ಆದರೆ ಊರಿನ ಬೆಟ್ಟದ ಬಳಿ ಇರುವ ಕೊಂಡಲ ಶ್ರೀ ಲಕ್ಷ್ಮೀನರಸಿಂಹ ಸ್ವಾಮಿಯವರ ಅರ್ಚನೆ, **ಶಾತ್ತಾದ ಶ್ರೀ ವೈಷ್ಣವರಲ್ಲಿಯೇ** ಇದೆ. ದೇವಸ್ಥಾನದ ಜೀರ್ಣೋದ್ಧಾರದ ಕೆಲಸಗಳು ಭರದಿಂದ ಸಾಗಿವೆ ಎಂದು ತಿಳಿದು ಬಂದಿದೆ.

ಕೆಂಪೇಗೌಡನ ಮಾಗಡಿ ಬಳಿಯ ತಿರುಮಲೆ ರಂಗನಾಥಸ್ವಾಮಿಯವರ ಅರ್ಚನೆಯು, ಹಿಂದೆ **ಶಾತ್ತಾದ ಶ್ರೀ ವೈಷ್ಣವ** ಶಾಖೆಯವರಿಗಿದ್ದು, ಇತ್ತೀಚೆಗೆ (ಬಹುಶಃ 70-80 ವರುಷಗಳ ಹಿಂದೆ) ಬದಲಾಗಿದೆ. ಇಲ್ಲಿನ **ಶಾತ್ತಾದ ಶ್ರೀ ವೈಷ್ಣವರಿಗೆ** ಇಂದೂ **ಸ್ಥಾನೀಕರು** ಎಂದು ಕರೆಯುತ್ತಾರೆ. ತಮಿಳು ಸಂಪ್ರದಾಯದಂತೆ, ಸ್ಥಾನೀಕರು ಎಂದರೆ ಅರ್ಚಕರು ಎಂದರ್ಥವಾಗುತ್ತದೆ.

ಹೀಗೆ ನೂರಾರು ಪ್ರಸಂಗಗಳಲ್ಲಿ **ಶಾತ್ತಾದ ಶ್ರೀ ವೈಷ್ಣವರ ಅರ್ಚಕ ವೃತ್ತಿ**, ದೇವಸ್ಥಾನದಲ್ಲಿದ್ದ ಇತರೆ ಸ್ಥಾನಮಾನಗಳು, ಒಂದೊಂದಾಗಿ ಕಳಚಿ ಬೀಳುತ್ತಿರುವುದನ್ನು ಗಮನಿಸಬಹುದು.

# ಕೊನೆಯ ಮಾತು

ಶ್ರೀ ವೈಷ್ಣವ ಮತದಲ್ಲಿ **ಶಾತ್ತಿನಿ, ಶಾತ್ತಾದ** ಶಾಖೆ ಎಂದು, ಏಕೆ, ಯಾರಿಂದ, ಹೇಗೆ ಪ್ರಾರಂಭವಾಯಿತು; ಅಂದಿನ ಯಾವ ಸಾಮಾಜಿಕ ಆವಶ್ಯಕತೆಯನ್ನು ಪೂರೈಸಲು ಈ ಶಾಖೆಗಳ ಅಗತ್ಯವಿತ್ತು; ಆಯಾ ಶಾಖೆಯ ಜನಗಳು ಸಾಮಾಜಿಕವಾಗಿ ಆಧ್ಯಾತ್ಮಿಕವಾಗಿ ಯಾವ ಯಾವ ಮಾರ್ಗದಿಂದ ಯಾವ ಯಾವ ಗುರಿಯನ್ನು ಸಾಧಿಸಲು ನಿಯೋಜಿಸಲಾಗಿತ್ತು, ಇತ್ಯಾದಿ ಅನನ್ವೇಷಿತ ವಿಷಯಗಳನ್ನು ಹುಡುಕುವ ಹಾದಿಯಲ್ಲಿ; ಈ ವಿಷಯಗಳು ನನ್ನನ್ನು ಆಕರ್ಷಿಸಿದವು ಅವುಗಳನ್ನೇ ಆರಿಸಿ ಓದುಗರ ಮುಂದೆ ಯಥಾ ಮತಿ ಯಥಾ ಶಕ್ತಿ ಇಟ್ಟಿದ್ದೇನೆ. ಈ ಪುಸ್ತಕವೇನೂ ಸಂಪೂರ್ಣವಾದ, ಅತ್ಯಂತ ಸಮರ್ಪಕವಾದ ಗ್ರಂಥವೇನಲ್ಲ. ಈ ದಿಶೆಯಲ್ಲಿ ರವೆಯಷ್ಟಾದರೂ ತಿಳಿದುಕೊಳ್ಳಬೇಕೆಂದು ಅಭಿಲಾಷೆಯಿರುವವರಿಗೆ, ಇದು ಪ್ರಥಮ ಪರಿಚಯದ ಪುಸ್ತಕವಾದರೆ, ಅವರ ಕುತೂಹಲ ಕೆರಳಿಸುವುದಾದರೆ, ಈ ಪರಿಶ್ರಮಕ್ಕೆ ಮನ್ನಣೆ ದೊರೆತಂತೆಯೇ ! ಈ ಮಾರ್ಗದಲ್ಲಿ ಇದೊಂದು ಚಿಕ್ಕ ಸಂಶೋಧನಾ ಪ್ರಪ್ರಥಮ ಗ್ರಂಥವಾಗಬಹುದೆಂದು ನಮ್ರತೆಯಿಂದ ಭಾವಿಸಿದ್ದೇನೆ.

ಆಚಾರ್ಯ ತ್ರಯರಲ್ಲಿ ಶಂಕರಾಚಾರ್ಯರ ಅವತಾರ, ಭಾರತದ ಒಂದು ವಿಶಿಷ್ಟ ಸಂಧಿಕಾಲದಲ್ಲಿ ಆಯಿತು. ಕರ್ಮಕಾಂಡದ ಬಂದಳಿಕೆಯೇ ಹಿಂದೂ ಧರ್ಮದಲ್ಲಿ ಬಹುವಾಗಿ ಬೆಳೆದು; ಯಾಗ, ಯಜ್ಞಗಳ ಆಂತರಿಕ ಗುರಿ ಮಾಯವಾಗುತ್ತಾ ಬಂದು, ಪಶು ಬಲಿಯೇ ಹುಲುಸಾಗಿ ಬೆಳೆದುಬಿಟ್ಟಿದ್ದ ಕಾಲದಲ್ಲಿ, ಪೈರಿಗಿಂತ ಕಳೆಯೇ ಭೋಗವಾಗಿ ಬೆಳೆದು ನಿಂತಿದ್ದ ಕಾಲದಲ್ಲಿ ಈ ಮಹದಾಚಾರ್ಯರ ಅವತಾರವಾಯಿತು.

ಈ ವೇಳೆಗಾಗಲೇ ಭಾರತೀಯವಾದ **ಬೌದ್ಧ** (ಕ್ರಿ.ಪೂ. 532–487), **ಜೈನ** ಮತಗಳು (ಕ್ರಿ.ಪೂ. 497–467) ಜನನವಾಗಿದ್ದು, ವೈದಿಕ ಮತವನ್ನು ಆವರಿಸುತ್ತಾ ಬರುತ್ತಿದ್ದವು. ಈ ಸಂಕ್ರಮಣ ಕಾಲದಲ್ಲಿ, ಹಿಂದೂ ಧರ್ಮದ ಸೂರ್ಯನಿಗೆ ಅನ್ಯಮತಗಳು ರಾಹುವಂತೆ ಸುತ್ತೆಲ್ಲ ವ್ಯಾಪಿಸುತ್ತಿದ್ದಾಗ, **ಶಂಕರರ** (ಕ್ರಿ.ಶ. 788–820) ಅವತಾರವಾದುದು; ಹಿಂದೂಗಳ **ಭಾಗ್ಯ**

ವಿಶೇಷ. ಇಲ್ಲದಿದ್ದರೆ ಈಗ ಹಿಂದೂಗಳೆನಿಸಿಕೊಳ್ಳುವ ನಾವೆಲ್ಲ ಜೈನರಾಗಿಯೋ ಬೌದ್ಧರಾಗಿಯೋ ಇರಬೇಕಾಗುತ್ತಿತ್ತು.

ಹಿಂದೆ ಬೇರೊಂದು ದಿಕ್ಕಿನಲ್ಲಿ ಅಲೆಗ್ಸಾಂಡರನು ಕ್ರಿ.ಪೂ. 326 ರಲ್ಲಿ ಇಲ್ಲಿಗೆ ಬಂದು ಹೋಗಿದ್ದ. ಅಲೆಗ್ಸಾಂಡರನ ರಾಯಭಾರಿ ಸೆಲ್ಯೂಕಸನು ಕ್ರಿ.ಪೂ. 305 ರಲ್ಲಿ ಇಲ್ಲಿಗೆ ದಂಡಯಾತ್ರೆಗಾಗಿ ಬಂದಿದ್ದ. ಆದರೂ ಭಾರತದ ಧಾರ್ಮಿಕ ಪ್ರಪಂಚಕ್ಕೆ ಆಘಾತವೇನಾಗಿರಲಿಲ್ಲ.

ಮುಂದೆ ಭಾರತಕ್ಕೆ ಮುಸಲ್ಮಾನರ ಚಂಚು ಪ್ರವೇಶವು ಕ್ರಿ.ಶ.705ರಿಂದ 715ರ ಒಳಗೆ ಆಯಿತು. ಮಲಬಾರ್ ತೀರದಲ್ಲಿ ಕ್ರಿ.ಶ. 7ನೇ ಶತಮಾನದ ಹೊತ್ತಿಗೆ ಸಾಕಷ್ಟು ಸಂಖ್ಯೆಯಲ್ಲಿ ಈ ಜನ ಬಂದು ನೆಲೆಸಿದ್ದರು ಬಾಸ್ರಾದ ಖಲೀಫನಾದ ಅಲ್‌ಹಜಾಜ್ (ವಲೀದ್)ನ ಅಳಿಯನಾದ ಮಹಮದ್ ಬಿನ್ ಖಾಸಿಂನು ಕ್ರಿ ಶ. 711 ರಿಂದ 713 ರ ವೇಳೆಗೆ ಸಿಂಧ್ ಮತ್ತು ಮುಲ್ತಾನ್ ಪ್ರಾಂತ್ಯಗಳನ್ನು ಗೆದ್ದಿದ್ದ. ಪರಕೀಯ ಮುಸಲ್ಮಾನ ಧರ್ಮದ ಒಂಟೆ ನಮ್ಮ ಡೇರೆಯನ್ನು ಹೊಕ್ಕು ಮುಂದುವರೆಯುತ್ತಲೇ ಇತ್ತು. ಇಂತಹ ಉತ್ಕಟ ಪರಿಸ್ಥಿತಿಯಲ್ಲಿ **ಭಗವಾನ್ ರಾಮಾನುಚಾರ್ಯರ** ಜನನವಾಯಿತು. ಇದೊಂದು ಐತಿಹಾಸಿಕ ಘಟನೆ, ಭಾರತದ ಭಾಗ್ಯ ವಿಧಾತನು ನಮ್ಮ ಮೇಲೆ ತೋರಿದ ಕೃಪೆ.

ಮುಂದೆ ಕ್ರಿಶ್ಚಿಯನ್ನರಾದ ಪೋರ್ಚುಗೀಸರು ಕ್ರಿ.ಶ. 1499 ರಲ್ಲಿ ಗೋವಾಕ್ಕೆ ಬಂದರು 1654 ರಲ್ಲಿ ಡಚ್ಚರು ಸಿಲೋನಿನಲ್ಲಿ ಇಳಿದರು. 1600 ರಲ್ಲಿ ಬ್ರಿಟಿಷರ ಈಸ್ಟ್ ಇಂಡಿಯಾ ಕಂಪನಿ ಪ್ರಾರಂಭವಾಗಿತ್ತು. 1602 ರಲ್ಲಿ ಡಚ್ ಈಸ್ಟ್ ಇಂಡಿಯಾ ಕಂಪನಿಯು, 1604 ರಲ್ಲಿ ಫ್ರೆಂಚ್ ಈಸ್ಟ್ ಇಂಡಿಯಾ ಕಂಪನಿಯು ಪ್ರಾರಂಭವಾದವು. ಮುಂದೆ ಈ ಎಲ್ಲ ಬರುವ ಧಾರ್ಮಿಕ ಆಘಾತವನ್ನು ತಾಳಿ[illegible]ಲು, ಮತ್ತೆ ವೈದಿಕ ಮತವನ್ನು ಪುನರುದ್ಧರಿಸಲು ಕಾರಣಪುರುಷರ ಅ[illegible]ರ ಅಗತ್ಯವಾಗಿತ್ತು. ಈ ಎಲ್ಲ ಅವಶ್ಯಕತೆಗಳನ್ನು ಪೂರೈಸುವುದಕ್ಕಾಗಿ; ಅಭೀಪ್ಸೆಗಳನ್ನು ತಣಿಸುವುದಕ್ಕಾಗಿ ಜಗದ್ವಂದ್ಯರು ಜನಿಸಿದರು. ಅದರಂತೆ **ಭಗವಾನ್ ರಾಮಾನುಜಾಚಾರ್ಯರು** (ಕ್ರಿ.ಶ.

1017 ರಿಂದ 1137) ಹನ್ನೊಂದನೇ ಶತಮಾನದಲ್ಲಿ ಜನಿಸಿದರು. **ಮಧ್ವಾಚಾರ್ಯರು** (ಕ್ರಿ.ಶ. 1199 ರಿಂದ 1278) ಹನ್ನೆರಡನೇ ಶತಮಾನದ ಅಂತ್ಯದಲ್ಲಿ ಜನಿಸಿದರು. ಇದರಿಂದ ವೈದಿಕ ಮತವು ಉಳಿಯಿತು, ಬೆಳೆಯಿತು. ಇಲ್ಲದಿದ್ದರೆ ಹಿಂದೂಗಳೆಂದು ಹೇಳಿಕೊಳ್ಳಲು ಒಬ್ಬರೂ ಸಿಗದಂತೆ, ನಾವೆಲ್ಲರೂ ಮುಸಲ್ಮಾನರಾಗಿಯೋ, ಕ್ರಿಶ್ಚಿಯನ್ನರಾಗಿಯೋ ಈ ವೇಳೆಗೆ ಮತಾಂತರಗೊಳಗಾಗಬೇಕಾಗುತ್ತಿತ್ತು. ಮುಸಲ್ಮಾನರ ಜೋರು ಜುಲುಮೆ, ಅತ್ಯಾಚಾರ. ಅನಾಚಾರ, ಒತ್ತಾಯ, ಕತ್ತಿಯ ಕುಯಿತಕ್ಕೆ; ಕ್ರಿಶ್ಚಿಯನ್ನರು ಒಡ್ಡಿದ ಆಮಿಷಗಳಾದ ಹಿಟ್ಟಿನ ವಿದ್ಯೆ, ವೈದ್ಯ, ಉದ್ಯೋಗ, ಕುರುಡು ಕಾಂಚಾಣಗಳಿಗೆ ನಾವು ತುತ್ತಾಗಬೇಕಾಗಿತ್ತು.

ಬಹು ಹಿಂದೆ, ಉತ್ತರದ ಆರ್ಯ ಋಷಿಗಳ ಚಿತ್ತಪಟಲಕ್ಕೆ ಗೋಚರವಾದ ವೈದಿಕ ಧರ್ಮದ ಮೇಲೆ; ಈ ಮೇಲಿನ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಸಂಸರ್ಗಗಳು, ಸಂಘರ್ಷಗಳು ಪರಿಣಾಮ ಬೀರಿದವು ತಾಯಿಬೇರೇ ಬುಡಮೇಲಾಗುವ ಉತ್ಕ್ರಾಂತಿ ಉಂಟಾಯಿತು. ಒಂದು ಧರ್ಮದ ಬೆಳೆ, ಬೆಳೆಯಬೇಕಾದರೆ ರಾಜಕೀಯ ರಂಗವು ಯಾವುದೇ ತುಮುಲಗಳಿಲ್ಲದೆ ಶಾಂತವಾಗಿರಬೇಕು. ಆದರೆ ಅದು ಭೀಭತ್ಸವಾಗಿತ್ತು. **ಇಂತಹ ರುದ್ರ ಗಂಭೀರ ಸನ್ನಿವೇಶದಲ್ಲಿ ಆಚಾರ್ಯತ್ರಯರು ಜನಿಸಿದುದು ವೈದಿಕ ಧರ್ಮದ ಪುಣ್ಯ.**

ಈ ಆಚಾರ್ಯ ತ್ರಯರೆಲ್ಲರೂ (ನಾಲ್ಕನೇ ಆಚಾರ್ಯರು ಇನ್ನೂ ಜನನವಾಗಿಲ್ಲ, ಈಗ ಆವಶ್ಯಕತೆಯೂ ಇಲ್ಲ) ದಕ್ಷಿಣದವರು. ಉತ್ತರದಿಂದ ಬೆಳೆದು ಬಂದ ಧಾರ್ಮಿಕ ದಿವ್ಯ ನಂದಾದೀವಿಗೆಗೆ, ನಿರಾಂಜನ ಕಂಬದ ಆಸರೆ ಇತ್ತು; ಮತ್ತೆ ತುಪ್ಪ ಬತ್ತಿ ಹಾಕಿ, ಚೆನ್ನಾಗಿ ಪ್ರಜ್ವಲಿಸಿದ ಕೀರ್ತಿ **ದಾಕ್ಷಿಣಾತ್ಯರದು.** ಇದು **ನಮ್ಮ ಹೆಮ್ಮೆ.** ಈ ಆಚಾರ್ಯ ತ್ರಯರು ಅದ್ವೈತ, ವಿಶಿಷ್ಟಾದ್ವೈತ, ದ್ವೈತ ತತ್ವಗಳ ಪ್ರತಿಪಾದನೆಗಳ ಮುಖಾಂತರ ವೈದಿಕ ಮತವನ್ನು ಮತ್ತೆ ಪುನರುಜ್ಜೀವನಗೊಳಿಸಿದರು.

ಕಾಲಾಂತರದಲ್ಲಿ ಈ ಮೇಲಿನ ಮೂರು ಶಾಖೆಗಳಲ್ಲಿ ಅನೇಕ ಉಪಶಾಖೆಗಳು, ಉಪಶಾಖೆಗಳಲ್ಲಿ ಮರಿ ಉಪಶಾಖೆಗಳು ಹುಟ್ಟಿಕೊಂಡವು. ಅಖಂಡ

ಹಿಂದೂಗಳ ಉತ್ಕಟ ಉತ್ಕರ್ಷವನ್ನೇ ಏಕ ಗುರಿಯಾಗಿ ಇಟ್ಟುಕೊಂಡು ಅನೇಕತೆಯಲ್ಲಿ ಏಕತೆಯನ್ನೇ ಗುರಿಯಾಗಿಟ್ಟುಕೊಂಡು; ವೈಜ್ಞಾನಿಕವಾಗಿ ಧಾರ್ಮಿಕವಾಗಿ, ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಯಾವುದೋ ಒಂದು ಅವ್ಯಕ್ತ ಉಪಯುಕ್ತತೆಗೆ, ಈ ಪ್ರಭೇದಗಳು ಜನಿಸಿದವು. ಆದರೆ ಕಾಲಾಂತರ ದಲ್ಲಿ ಈ ಅನೇಕತೆಯಲ್ಲಿ—ಏಕತೆಯನ್ನು ಐಕ್ಯತೆಯನ್ನು—ಕಾಣುವುದನ್ನು ಮರೆತು, ಅನೈಕ್ಯತೆಯನ್ನೇ ಕಾಣ ಹೊರಟೆವು. ಪ್ರಭೇದಗಳ ಹೆಸರಿನಲ್ಲಿ ಧರ್ಮದ ಹೆಸರಿನಲ್ಲಿ ಆದ ಚೀರಾಟ, ಕಚ್ಚಾಟ ಅಷ್ಟಿಷ್ಟಲ್ಲ. ಭಾರತದ ಸಾಮಾಜಿಕ ಜೀವನ ಇದುವರೆಗೂ ಇಡಿಗಾಳಿನಂತೆ ಇದ್ದುದು ಹೋಳಾಯಿತು. ಭಾರತೀಯ ಐಕ್ಯಜೀವನ ಸೀಳಾಯಿತು, ಹಾಳಾಯಿತು. ಒಂದೇ ವಿಚಾರ ಧಾರೆಯನ್ನು ಪ್ರತಿಬಿಂಬಿಸುತ್ತಿದ್ದ ಭಾರತದ ಸಾಮಾಜಿಕ ಸಾಂಸ್ಕೃತಿಕ ದರ್ಪಣ ಚೂರಾಯಿತು; ನೂರು ನುಚ್ಚಾಯಿತು. ಇಂದು ಕಾಣುತ್ತಿರುವ ದರ್ಪಣ ಸಹಸ್ರಾರು ಚೂರುಕನ್ನಡಿಯನ್ನು ಜೋಡಿಸಿಟ್ಟ ದರ್ಪಣ. ಇದರಲ್ಲಿ ಒಂದು ಪ್ರತಿಬಿಂಬ ಕಾಣುತ್ತಿಲ್ಲ, ಅಸಂಖ್ಯಾತ ಚಿತ್ರಣಗಳು ಕಾಣಬರುತ್ತಿವೆ. ಇಂದು ನಾವು ನೈಜ ಅರ್ಥದಲ್ಲಿ ಭಾರತೀಯರಾಗಿಲ್ಲ, ವೈದಿಕ ಧರ್ಮದವರಾಗಿಲ್ಲ, ಹಿಂದೂಗಳಾಗಿಲ್ಲ. ಕೇವಲ ಜಾತಿವಾದಿಗಳಾಗಿದ್ದೇವೆ, ಸ್ಮಾರ್ತರಾಗಿದ್ದೇವೆ, ಶ್ರೀವೈಷ್ಣವರಾಗಿದ್ದೇವೆ, ವೈಷ್ಣವರಾಗಿದ್ದೇವೆ, ಲಿಂಗಾಯಿತರಾಗಿದ್ದೇವೆ ಇಲ್ಲವೆ ಮತ್ತೊಂದು ಜಾತಿಯವರಾಗಿದ್ದೇವೆ. ಅಷ್ಟೇ ಅಲ್ಲ ಈ ಅಂಗಗಳಲ್ಲಿನ ಉಪ–ಉಪ–ಉಪ ಜಾತಿಯವರಾಗಿದ್ದೇವೆ. ಕೇವಲ ಜಂಬಗಾರರಾಗಿದ್ದೇವೆ, ವಿಜೃಂಬ ಗಾರರಾಗಿದ್ದೇವೆ. ಪಂಥದ ಪೋಷಕರಾಗಿದ್ದೇವೆ. ಹೀಗಾಗಿ ಮೂಲ ಹಿಂದೂ ಧರ್ಮದ ದಿವ್ಯ ದರ್ಶನದಿಂದ ವಂಚಿತರಾಗಿ ಹೋಗಿದ್ದೇವೆ.

ಅದರಂತೆ ಶ್ರೀವೈಷ್ಣವ ಧರ್ಮದ ವಿಧಾನಸೌಧದಲ್ಲೂ ಬಿರುಕುಗಳಾ ದವು. ಯಾವುದೋ ಒಂದು ವಿಚಾರದ ವೈಶಿಷ್ಟ್ಯತೆಯನ್ನು ಎತ್ತಿ ಹಿಡಿಯಲು ಉಗಮವಾದ ಈ ಶಾಖೆಗಳು; ಪ್ರತ್ಯೇಕ ಕೆರೆ ಕುಂಟೆಗಳಾದವು. ಮುಖ್ಯ ನದಿಗೆ ಉಪ ನದಿಗಳಾಗಲಿಲ್ಲ. ಹೂವಿನ ಮಾಲೆಯಾಗಲಿಲ್ಲ. ಎರಚಿದ ಬಿಡಿಹೂವಿ ನಂತಾಗಿದ್ದೇವೆ. ಒಂದು ವಿಶಿಷ್ಟ ತಾತ್ವಿಕ ವಿಚಾರದ ಹಿನ್ನೆಲೆಯಲ್ಲಿ ಮೂಲಕ್ಕೇ ಧಕ್ಕೆಯಾಗದ ಹಾಗೆ ಆಯಾ ವಿಶೇಷತ್ವವನ್ನು ಪರಿಪೋಷಿಸಿ

ಕೊಳ್ಳಲು ಮೂಡಿ ಬಂದ ಶಾಖೆಗಳಲ್ಲಿ ಈ ಜನತೆ; ತೆಂಕಲೆಯವರೆಂದು, ವಡ ಗಲೆಯವರೆಂದು ಹಂಚಿಹೋದರು. ಭಗವದಾರಾಧನ ಪದ್ಧತಿಯಲ್ಲಿ ನಾವು ಪಾಂಚರಾತ್ರರೆಂದು ವೈಖಾನಸರೆಂದು ಪ್ರತ್ಯೇಕ ದ್ವೀಪವಾಸಿಗಳಾಗಿ ಹೋದೆವು. ಸಂಪರ್ಕಶೂನ್ಯರಾಗಿ ಹೋದೆವು

ಇಂತಹುದೋ ಯಾವುದೇ ಒಂದು ಕಾರಣದಿಂದ (ಪ್ರವೃತ್ತಿಮಾರ್ಗ, ನಿವೃತ್ತಿಮಾರ್ಗ) ಶಾತ್ತಿನಿ, ಶಾತ್ತಾದ ಶಾಖೆಯಲ್ಲಿ ಸ್ವಯಂ ಸೆರೆಯಾಳಾದೆವು. ಒಂದಾನೊಂದು ಕಾಲದಲ್ಲಿ ಅರ್ಚಾವತಾರಿ ಭಗವಂತನ ಎದುರಿಗೆ ನೂರೆಂಟೂ ದಿವ್ಯ ಕ್ಷೇತ್ರಗಳಲ್ಲಿ ಮತ್ತು ಅಸಂಖ್ಯಾತ ಚಿಕ್ಕಪುಟ್ಟ ದಿವ್ಯ ಕ್ಷೇತ್ರ ಗಳಲ್ಲಿ ಅಖಂಡವಾಗಿ ಅತ್ತ ಶಾತ್ತಿನಿಯವರು, ಇತ್ತ ಶಾತ್ತಾದರು, ದ್ರವಿಡವೇದ ಪ್ರಬಂಧ ಸೇವೆ ಸಲ್ಲಿಸುತ್ತಿದ್ದಾಗ, ಹಿನ್ನುಡಿ, ಮುನ್ನುಡಿ ಸೇವಾ ಕಾಲಕ್ಷೇಪ ಮಾಡುತ್ತಿದ್ದವರು, ಕಾಲಾಂತರದಲ್ಲಿ ದಾಯಾದಿಗಳಾದರು. ಸ್ವಯೂಥರಲ್ಲಿ ಕಲಹ ಬೆಳೆಯಿತು. ಒಬ್ಬರು ಗೆದ್ದರು, ಒಬ್ಬರು ಸೋತರು. ಆದರೆ ಸೋತವರು ಸಾಯಲಿಲ್ಲ, ಅಷ್ಟೇ ಪುಣ್ಯ.

ಒಂದಾನೊಂದು ಕಾಲದಲ್ಲಿ ಅನೇಕತೆಯಲ್ಲಿ ಏಕತೆಯನ್ನು ಕಾಣುತ್ತಿದ್ದುದು ಹೋಗಿ, ನಾವು ಈಗ ಪರಸ್ಪರ ದೂರ ಸರಿದು, ಹೃದಯ ವೈಶಾಲ್ಯತೆಯನ್ನು ಮರೆತು, ಮನಸ್ಸಿನ ಬಾಗಿಲು ಮುಚ್ಚಿ, ಹೃದಯದ ಕಿಟಕಿಯನ್ನೂ ಬಡಿದು ನಿಶ್ಚಿಂತರಾಗಿ ಹೋಗಿದ್ದೇವೆ. ಹೃದಯಶೂನ್ಯರಾಗಿದ್ದೇವೆ. ಮಮಕಾರ ರಹಿತರಾಗಿದ್ದೇವೆ. ಕದಾಚಿತ್ ಪರಸ್ಪರ ಕಂಡಾಗ ಗುರುತೂ ಹಿಡಿಯದಷ್ಟು ಮಾಯಾ ಛಾಯೆಯಲ್ಲಿ ಸಿಲುಕಿಕೊಂಡಿದ್ದೇವೆ. ನೆನಪು ಬಂದರೂ ಕಾಣದಂತೆ ವರ್ತಿಸುತ್ತಾ ಆತ್ಮವಂಚನೆ ಮಾಡಿಕೊಳ್ಳುತ್ತಿದ್ದೇವೆ. ಕೆಳಗೆ ಬಿದ್ದವನನ್ನು ಮತ್ತೆ ಬಡಿಗೆಯಲ್ಲಿ ಬಡಿಯಲು ಹೊರಟಿದ್ದೇವೆ. ಇಲ್ಲವೇ ದಾರಿಹೋಕನಂತೆ ನಿರ್ಲಿಪ್ತತೆಯಿಂದ ನೋಡಿಯೂ ನೋಡದ ಹಾಗೆ ಇರುತ್ತೇವೆ. ಮಾತೃ ಹೃದಯದಿಂದ ಮರುಗುವ, ಹತ್ತಿರ ಬಂದು ಮೇಲೆತ್ತುವ ಕಾರುಣ್ಯ ಗುಣದಿಂದ ವಿಮುಖರಾಗಿದ್ದೇವೆ.

ಇದು ಯಾರಿಗೂ ಯಾವ ಕಾಲಕ್ಕೂ ಶೋಭೆಯಲ್ಲ, ಶ್ರೇಯಸ್ಸಲ್ಲ, ಪ್ರೇಯಸ್ಸೂ ಅಲ್ಲ. ಇದು ಶ್ರೀ ವೈಷ್ಣವತ್ವಕ್ಕಾಗಲಿ ವೈದಿಕ ಧರ್ಮಕ್ಕಾಗಲೀ

ಮಂಗಳದ ಕುರುಹೂ ಅಲ್ಲ. **ನಮ್ಮ ದೈನಂದಿನ ವ್ಯವಹಾರಗಳು ಮುಂದಿನ ಇತಿಹಾಸಕಾರನಿಗೆ ಒಳ್ಳೆಯ ಸಾಮಗ್ರಿಯು ಎನ್ನುವುದನ್ನು, ನಾವೆಲ್ಲರೂ ಮರೆತಂತೆ ಕಾಣುತ್ತಿದೆ ಎಂದು, ನಿಚ್ಚಳವಾಗಿ ನಿಶ್ಚಯವಾಗುತ್ತಿದೆ. ಆದರೆ ಇನ್ನು ಮುಂದಾದರೂ ವೈಷ್ಣವತ್ವವನ್ನು ಆರಂಭ ಸ್ಥಳದಲ್ಲಿ ಹೊತ್ತು ತಿರುಗಾಡುವ ದಿಗ್ಗಜಗಳಾಗೋಣ.**

ವೇದ ಮಂತ್ರವೊಂದು ಹೀಗೆ ಹರಸುತ್ತದೆ :—

**ಓಂ ಅಭಯಂ, ಮಿತ್ರಾದಭಯಂ, ಅಮಿತ್ರಾದಭಯಂ, ಜ್ಞಾತಾದಭಯಂ, ಪರೋಕ್ಷಾತ್ । ಅಭಯಂ, ನಕ್ತಂ ಅಭಯಂ ದಿವಾ ನಃ, ಸರ್ವಾ ಆಶಾ ಮಮ ಮಿತ್ರಂ ಭವಂತು.**

ನಮಗೆ ಮಿತ್ರನಿಂದ ಅಭಯವಿರಲಿ, ಅಮಿತ್ರನಿಂದಲೂ (ಶತೃ) ಅಭಯ ವಿರಲಿ, **ಪರಿಚಿತನಿಂದಲೂ ಅಭಯವಿರಲಿ, ಅಪರಿಚಿತನಿಂದಲೂ ಅಭಯವಿರಲಿ**, ರಾತ್ರಿಯಲ್ಲಿ ಅಭಯವಿರಲಿ, ಹಗಲಿನಲ್ಲಿ ಅಭಯವಿರಲಿ, ಎಲ್ಲ ದಿಕ್ಕುಗಳೂ ನನಗೆ ಸ್ನೇಹದಿಂದ ಕೂಡಿರಲಿ.

**ಓಂ ತಚ್ಚಕ್ಷುರ್ದೇವ ಹಿತಂ ಪುರಸ್ತಾಚ್ಛುಕ್ರ ಮುಚ್ಚರತ್, ಪಶ್ಯೇಮ ಶರದಃ, ಶತಂ ಜೀವೇಮ, ಶರದಃ ಶತಗ್ಂ, ಶೃಣುಯಾಮ ಶರದಃ, ಶತಂ ಪ್ರಬ್ರವಾಮ, ಶರದಃ ಶತಮದೀನಾಃ ಸ್ಯಾಮ, ಶರದಃ ಶತಂ ಭೂಯಶ್ಚ, ಶರದಃ ಶತಾತ್.** (ಯಜು–36–24)

---

ಶಾತ್ತಾದ ಶಾಖೆಯು ಭಗವಾನ್ ರಾಮಾನುಜಾಚಾರ್ಯರ ಕಾಲದಲ್ಲೂ ಇತ್ತೆಂಬುದು ಈ ಕೆಳಗಿನ ಅಂಶದಿಂದ ಸ್ಪಷ್ಟವಾಗುತ್ತಿದೆ. "ಶ್ರೀ ವೈಷ್ಣವ ರೆಳುಂತರುಳಿ ಅಮುತು ಚೆಯ್ತು ತಿರುವಾಲವಟ್ಟ ಕೈಂಕರ್ಯ ಚೇಯ್ತರುಳ ವೇಣುಮೆನ್ರು ಪೆರು ಮಾಳೈ ಸೇವಿಕ್ಕ ಮೀಂಟೆಳುಂತರುಳಿವಾರ್—ಅವರ್ ಚಾತ್ತಾದ ಶ್ರೀ ವೈಷ್ಣವ ರಾಕ್ಕೈಯಾಲೆ...... .." ಮತ್ತು "ಏಳುಪತ್ತನಾಲಿ ಸಿಂಹಾಸನಸ್ಥರಾನ ಆಚಾರ್ಯ ಪುರುಷರ್ ಕಾಳಾಲುಂ ಅಸಂಖ್ಯಾನರಾನ ಚಾತ್ತಿನಿ ಚಾತ್ತಾದ ಮೊದಲಿ ಕಾಳಾಲುಂ ..." (ಗುರುಪರಂಪರೆ. ಪುಟ 170) ಇತ್ಯಾದಿ ಉಲ್ಲೇಖಗಳಿಂದ ಇದು ಸ್ವಯಂ ಸ್ಪಷ್ಟವಾಗುತ್ತದೆ—ಸಂಪಾದಕ.

ವಿದ್ವಜ್ಜನರಿಗೆ ಹಿತನಾದ, ನಿರ್ಮಲನೂ ಜ್ಯೋತಿರ್ಮಯನೂ ಆದ ಪರಮಾತ್ಮನು, ಅನಾದಿ ಕಾಲದಿಂದ ಉನ್ನತವಾಗಿ ವಿರಾಜಿಸುತ್ತಿದ್ದಾನೆ. ನಾವು ನೂರು ವರ್ಷ ನೋಡೋಣ, ಜೀವಿಸೋಣ, ಆಲಿಸೋಣ, ಉತ್ತಮವಾಗಿ ಮಾತನಾಡೋಣ, ಆತ್ಮ ಗೌರವಶಾಲಿಗಳಾಗಿ ಇರೋಣ, ನೂರು ವರ್ಷಕ್ಕಿಂತ ಹೆಚ್ಚಾಗಿ ಕೂಡ ಈ ರೀತಿ (ಈ ಹಿಂದಿನ ರೀತಿಯಲ್ಲಿ) ಉತ್ಕೃಷ್ಟ ಬಾಳ್ವೆಯನ್ನು ನಡೆಸೋಣ.

ಅಷ್ಟೇ ಅಲ್ಲ :—

ವೈಷ್ಣವಾನಾಂ ದರ್ಶನಂ ಪುಣ್ಯಂ, ಸ್ಪರ್ಶನಂ ಪಾಪನಾಶನಂ.
ಸಂಭಾಷಂ ಸರ್ವತೀರ್ಥಾನಾಂ, ವಂದನಂ ಮೋಕ್ಷ ಸಾಧನಂ.

ಆಗಿರಲಿ. ಮತ್ತೆ :—

ಶಾತ್ತಿನಿ ಶ್ರೀ ವೈಷ್ಣವೇಭ್ಯೋ ಶುಭಮಸ್ತು ನಿತ್ಯಂ,
ಶಾತ್ತಾದ ಶ್ರೀ ವೈಷ್ಣವೇಭ್ಯೋ ಶುಭಮಸ್ತು ನಿತ್ಯಂ,
ಲೋಕಾ ಸಮಸ್ತಾ ಸುಖಿನೋ ಭವಂತು,
ಸಮಸ್ತ ಸನ್ಮಂಗಳಾನಿ ಭವಂತು.

ಕಟ್ಟಕಡೆಯದಾಗಿ :—

ಓಂ ದ್ಯೌಃ ಶಾಂತಿಃ, ಅಂತರಿಕ್ಷಗ್ಂ ಶಾಂತಿಃ,
ಪೃಥಿವೀ ಶಾಂತಿಃ, ಆಪಃ ಶಾಂತಿಃ, ಓಷಧಯಃ ಶಾಂತಿಃ,
ವನಸ್ಪತಯಃ ಶಾಂತಿಃ, ವಿಶ್ವೇ ದೇವಾಃ ಶಾಂತಿಃ,
ಬ್ರಹ್ಮ ಶಾಂತಿಃ, ಸರ್ವಗ್ಂ ಶಾಂತಿಃ, ಶಾಂತಿರೇವ ಶಾಂತಿಃ
ಸಾ ಮಾ ಶಾಂತಿರೇಧಿ. (ಯಜು. 36-17)

ದ್ಯುಲೋಕವು ಅಂತರಿಕ್ಷವು ಪೃಥಿವಿ ನೀರು—ಔಷಧಗಳು—ವನಸ್ಪತಿಗಳು ಸಮಸ್ತ ದೇವತೆಗಳು. ಮತ್ತು ಚೇತನರೂಪಿ ವಿದ್ವಾಂಸರು, ವೇದ ಮತ್ತು ಬ್ರಹ್ಮನು ಶಾಂತಿದಾಯಕರಾಗಲಿ. ಎಲ್ಲವೂ ಶಾಂತಿದಾಯಕವಾಗಲಿ.

ಶಾಂತಿಯೇ ಶಾಂತಿಯಾಗಲಿ. ಶಾಂತಿ ತಾನೇ ತಾನಾಗಿ ವಿರಾಜಿಸಲಿ. ಆ ಸರ್ವತ್ರ ವ್ಯಾಪಿನೀ ಶಾಂತಿಯು ನನ್ನ ಬಳಿಗೆ ಬರಲಿ.

ಏಕೇಕೆ ? ಎಲ್ಲರ ಬಳಿಗೂ ಬರಲಿ ! ಎಲ್ಲರ ಆತ್ಮೋತ್ಕರ್ಷಗಳಾಗಲಿ. ಆತ್ಮೋತ್ಥಾನವಾಗಲಿ.

---

# ಆಧಾರ ಗ್ರಂಥಗಳು

1) Sri Tirupati Devastanam Epigraphical Series Report 1930.

2) ಇವುಗಳ Inscriptions—Seven Volumes 1931—1938.

3) ಶ್ರೀರಂಗಂ ವೈಕುಂಠ ಏಕಾದಶಿ—ಅಧ್ಯಯನೋತ್ಸವಮು ಕರ್ತೃ—ಸಾಹಿತ್ಯ ಶಿರೋಮಣಿ ಸ್ಥಾನೀಕಂ—ಪಾರ್ಥಸಾರಥಿ ಅಯ್ಯಂಗಾರ್—ಡಿಸೆಂಬರು 1952.

4) Koyil Olugu–History of the Sri Rangam Temple by T. S. Partha Sarathy—July 1954.

5) ಕರ್ಣಾಟಕ ಪ್ರಪನ್ನಾಮೃತಮು.

6) The Origin and Growth of Sri Bhahmatantra Paraka Mutt by N. Desikachar, B A.–1949

7) ಗುರುಪರಂಪರ ಪ್ರಭಾವಮು. ಕರ್ತೃ—ಪಿನ್ ಬಳಗಿಯ ಪೆರು ಮಾಳ್ ಅಯ್ಯಂಗಾರ್–1878.

8) Life of Sri Ramanuja by Swamy Ramakrishnananda, Ramakrishna Mutt, Mylapur, Madras 4—1959.

# ಪರಿಶಿಷ್ಟ ಅ

ಕಂದಾಡೈ ರಾಮಾನುಜಯ್ಯಂಗಾರ್‌ರವರ ಬಗೆಗೆ ಉಲ್ಲೇಖವಿರುವ ಶಾಸನಗಳ ವಿವರ :— ಕಂದಾಡೈ ವಂಶದವರ ಕೆಲವು ಶಾಸನಗಳನ್ನು ಕೊಡಲಾಗಿದೆ.

## Tirupati Devastanam Inscriptions Vol. II

| ಅ. ಸಂ. | ಪುಟಗಳು | ಶಾಸನದ ಅನುಕ್ರಮ ಸಂಖ್ಯೆ | ದೇವಸ್ಥಾನದ ಶಾಸನದ ಅನುಕ್ರಮ ಸಂಖ್ಯೆ | ಶಾಸನ ರೂಪಿಸಿದ ಕಾಲ ಕ್ರಿ.ಶಕ |
|---|---|---|---|---|
| 1 | 43–45 | 26 | ತಿರುಮಲೈ–6 | 25–4–1467 |
| 2 | 62–63 | 36 | ತಿರುಪತಿ–295 | –11–1468 |
| 3 | 65–69 | 38 | ತಿರುಮಲೈ–70 | 28–2–1469 |
| 4 | 70–73 | 40 | ತಿರುಮಲೈ–5 | 24–5–1469 |
| 5 | 78–79 | 44 | ತಿರುಪತಿ–24 | 7–1–1470 |
| 6 | 80–82 | 45 | ತಿರುಪತಿ–30 | 6–5–1470 |
| 7 | 83–85 | 47 | ತಿರುಪತಿ–19 | 28–12–1470 |
| 8 | 89–98 | 50 | ತಿರುಮಲೈ–197 | 15–6–1473 |
| 9 | 98–100 | 51 | ತಿರುಮಲೈ–197(ಅ) | ಗೊತ್ತಿಲ್ಲ |
| 10 | 129–139 | 68 | ತಿರುಮಲೈ–200 | 23–11–1476 |
| 11 | 154–156 | 81 | ತಿರುಮಲೈ–163 | 11–8–1484 |
| 12 | 165–167 | 85 | ತಿರುಪತಿ–151 | ಗೊತ್ತಿಲ್ಲ |
| 13 | 305–309 | 133 | ತಿರುಮಲೈ–628 | 1–7–1495 |
| 14 | 324–326 | 136 | ತಿರುಮಲೈ–336 | 21–12–1496 |
| 15 | 338–339 | 141 | ತಿರುಪತಿ–50 | ಗೊತ್ತಿಲ್ಲ |

## T.D. Inscriptions Vol. III

| | | | | |
|---|---|---|---|---|
| 1 | 277–279 | 132 | ತಿರುಮಲೈ–38 | 13–4–1519 |
| 2 | 297–301 | 142 | ತಿರುಮಲೈ–601 | 28–11–1520 |
| 3 | 317–.... | 153 | ತಿರುಪತಿ–107 | 2–4–1522 |

# ಪರಿಶಿಷ್ಟ ಆ

ಶಾತ್ತ್ವದ ಶ್ರೀವೈಷ್ಣವರ ಉಲ್ಲೇಖ ಬರುವ ಕೆಲವು ಶಾಸನಗಳನ್ನು ಇದರಡಿ ನೀಡಲಾಗಿದೆ :-

**ತಿರುಪತಿ ದೇವಸ್ಥಾನದ ಅತಿಪುರಾತನ ಶಾಸನಗಳ ಒಂದನೇ ಸಂಚಿಕೆ (Vol. I) ಯಲ್ಲಿ ಬರುವ ಶಾಸನಗಳು :—**

1) ತಿರುಮಲ್ಲೈ ಶಾಸನ ನಂ. 26. (ಪುಟ )

**ತಿರುಪತಿ ದೇವಸ್ಥಾನದ ಅತಿಪುರಾತನ ಶಾಸನಗಳ ಎರಡನೇ ಸಂಚಿಕೆ (Vol. II) ನಲ್ಲಿ ಬರುವ ಶಾಸನಗಳು :—**

1) ತಿರುಪತಿ ಶಾಸನ ನಂ. 151 (ಪುಟ 165—167)
2) ತಿರುಮಲ್ಲೈ ಶಾಸನ ನಂ. 4 (ಪುಟ 35—36)
3) ತಿರುಮಲ್ಲೈ ,, ನಂ. 163 (ಪುಟ 154—156)
4) ತಿರುಮಲ್ಲೈ ,, ನಂ. 626 (ಪುಟ 318—324)
5) ತಿರುಪತಿ ಶಾಸನ ನಂ. 8 (ಪುಟ 48—50)
6) ತಿರುಮಲ್ಲೈ ಶಾಸನ ನಂ. 70 (ಪುಟ 65—69)
7) ತಿರುಮಲ್ಲೈ ,, ನಂ. 197 (ಅ) (ಪುಟ 98—100)
8) ತಿರುಮಲ್ಲೈ ,, ನಂ. 200 (ಪುಟ 129—139)

**ತಿರುಪತಿ ದೇವಸ್ಥಾನದ ಶಾಸನಗಳ ಮೂರನೇ ಸಂಚಿಕೆ (Vol. III) ಯಲ್ಲಿ ಬರುವ ಶಾಸನಗಳು :—**

1) ತಿರುಮಲ್ಲೈ ಶಾಸನ ನಂ. 277 (ಪುಟ 92—96)
2) ತಿರುಪತಿ ಶಾಸನ ನಂ. 148 ? (ಪುಟ 208—210)

# ತಪ್ಪು ಒಪ್ಪು ಓಲೆ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ಅರ್ಪಣೆ ಎಡಪುಟ | 4 | 5–8–1971 | 5–9–1971 |
| v ಮೂರು ಮಾತು ಪುಟವಲ್ಲಿ | 23 | ಶ್ರೀ ಶಠಜಿದ್ದರ್ಶನ | ಶ್ರೀ ಶಠಜಿದ್ದರ್ಶನ ಮತ್ತು ಸಂಪ್ರದಾಯ ಚಂದ್ರಿಕಾಯಾಂ ಹಾಗೂ ಸಮಯಾಚಾರ ಶುರಕ್ಕತ್ತಿನ್ |
| vi | 13 | ಬೀಳವುದಕ್ಕೆ | ಬೀಳುವುದಕ್ಕೆ |
| 6 | 6 | far | for |
| 7 | 18 | ಬದಗಣೆ | ಒದಗಣೆ |
| 21 | 16 | fined | find |
| 23 | 16 | feem | seem |
| 24 | 7 | ರಾಮಾನುಜನ್ | ರಾಮಾನುಜನ್ |
| 24 | 11 | ,, | ,, |
| 35 | 14 | 14–1–1953 | 1530 |
| 51 | 15 | ಶಾತ್ತಾವರೇ | ಶಾತ್ತಾದರೇ |
| 56 | 4 | ಮುತ್ತಿನಂತೆ | ನಕ್ಷತ್ರದಂತೆ |
| 70 | 9 | ಯಶೋದುಂಭಿಯನ್ನು | ಯಶೋದುಂದುಭಿಯನ್ನು |
| 72 | 25 | ಆದಿನಗಿಳಲ್ಲಿ | ಆ ದಿನಗಳಲ್ಲಿ |
| 89 | 5 | ಇಂತಹುದೋ ಯಾವುದೇ | ಇಂತಹುದೇ ಯಾವುದೋ |